## ಈ ಸಂಚಿಕೆಯಲ್ಲಿ..........



# ಮಾನಸ

ಸಂಪುಟ : ೩ ಸಂಚಿಕೆ : ೧೦
ಅಕ್ಟೋಬರ್ ೧೯೯೦

ಸಂಪಾದಕೀಯ ಮಂಡಳಿ:
ರಾಜೇಶ್ವರಿ ಎಚ್. ಎಸ್.,
ಚಂಪಾವತಿ ಎಚ್. ಎಸ್., ದು. ಸರಸ್ವತಿ,
ಸವಿತ ಎ., ಗೀತಾ ಜಿ. ಎಸ್.,

ಸಲಹೆ—ಸಹಕಾರ
ಇಳಾವಿಜಯ

ವಿಳಾಸ "ಮಾನಸ ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ (ಪೊ)
ಬೆಂಗಳೂರು—560067

ಬಿಡಿಪ್ರತಿ :2 ರೂ.
ಸೂಚನೆ: ವಾರ್ಷಿಕ ಚಂದಾ :20ರೂ.
ಆಜೀವ ಚಂದಾ: 250ರೂ.
ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು.
ಹಣವನ್ನು ಬ್ಯಾಂಕ್ ಡ್ರಾಫ್ಟ್, ಎಂ. ಓ.
ಮೂಲಕ ಸ್ವೀಕರಿಸಲಾಗುವುದು.

ಮುಖಪುಟ : [redacted]



# ಸಂಪಾದಕೀಯ

ಹೆಣ್ಣು ಶಿಶುವಿನ ವರ್ಷ ಮುಗಿಯುತ್ತಾ ಬಂದಿದೆ. ಈ ಒಂದು ವರ್ಷದಲ್ಲಿ ಏನೇನು ಸಾಧಿಸಿರುವೆವು ಎಂಬುದಕ್ಕೆ ಶೂನ್ಯವೇ ಉತ್ತರ, ಆದರೆ ಹೆಣ್ಣು ಮಕ್ಕಳ ಬಗ್ಗೆ ಆಡಳಿತಕ್ಕೆ ಹಾಗೂ ಸಮಾಜಕ್ಕೆ ಗಮನಹರಿಸುವ ಮನಸ್ಸಾಯಿತಲ್ಲ ಎಂಬುದೊಂದೇ ಸಮಾಧಾನ. ಏಕೆಂದರೆ ಸಾಧನೆಗೆ, ಸುಧಾರಣೆಗೆ ಒಂದು ವರ್ಷದ ಕಾಲಾವಧಿ ಏನೇನೂ ಸಾಲದು ಎಂಬುದು ನಿಜವಾದರೂ, ಈ ಯೋಜನೆಯನ್ನು ೫ ವರ್ಷಕ್ಕೋ ೧೦ ವರ್ಷಗಳಿಗೋ ಮಾಡಿದರೆ ಈ ಒಂದು ವರ್ಷದಲ್ಲಿ ಬಂದ ವರದಿ, ಅಧ್ಯಯನಗಳನ್ನು ಆಧರಿಸಿ ಹೊಸ ಹೊಸ ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳಬಹುದು, ಘೋಷಣೆಯೂ ಸಾರ್ಥಕವಾದೀತು.

ಮೇಲ್ನೋಟಕ್ಕೆ ನಿವಾರಿಸಬಹುದಾದ ಕೆಲ ಲೋಪದೋಷಗಳನ್ನು ತತ್‌ಕ್ಷಣ ಸರಿಪಡಿಸಿಕೊಳ್ಳಬಹುದು. ಉದಾ: ಆಮ್ನಿಯೋಸಿಂಥಿಸಿಸ್ ಮೂಲಕ ಹೆಣ್ಣು ಶಿಶುವನ್ನು ಗರ್ಭದಲ್ಲಿಯೇ ನಿವಾರಿಸಿಕೊಳ್ಳಲು ಈಗಿರುವ ಗರ್ಭಪಾತದ ಸೌಲಭ್ಯವನ್ನು ನಿಷೇಧಿಸಬಹುದು. ಇಂಥ ಕ್ರೂರ ಕೃತ್ಯಗಳಲ್ಲಿ ಭಾಗಿಯಾದವರಿಗೆ ಉಗ್ರಶಿಕ್ಷೆ ನೀಡುವಂತೆ ಕಾನೂನು ರೂಪಿಸುವುದು, ಬೆಳೆದ ಮೇಲೆ, ಬೆಳೆಯುವಾಗ ಬಾಲಕ, ಬಾಲಕಿಯರ ಮಧ್ಯೆ ಹೆತ್ತವರು ತೋರುವ ತಾರತಮ್ಯ ನಿವಾರಿಸುವ ತಿಳುವಳಿಕೆಯನ್ನು ಮಾಧ್ಯಮಗಳು ನೀಡುತ್ತಿರಬೇಕು, ಜೊತೆಗೆ ಸರ್ಕಾರ, ಸಮಾಜಗಳೂ ಈ ನಿಟ್ಟಿನಲ್ಲಿ ಶಕ್ತಿಮೀರಿ ಶ್ರಮಿಸಿದರೆ ಮುಂದಿನ ವರ್ಷಗಳಲ್ಲಿ ಹೆಣ್ಣುಮಗು — ಆರೋಗ್ಯಕರ ಮಹಿಳೆಯಾಗಿ ಬೆಳೆಯಲು ಸಾಧ್ಯ.

ಕಡ್ಡಾಯ ಶಿಕ್ಷಣವನ್ನು ಕಟ್ಟುನಿಟ್ಟಾಗಿ ಜಾರಿಗೆ ತಂದರೆ, ಜೊತೆಗೆ ಈ ಮೊದಲು ಕರ್ನಾಟಕ ಸರ್ಕಾರ ನೀಡುತ್ತಿದ್ದ ಈಗ ನಿಲ್ಲಿಸಿಬಿಟ್ಟಿರುವ ಉಚಿತ ಸಮವಸ್ತ್ರ, ಪಠ್ಯಪುಸ್ತಕಗಳನ್ನೂ ಪೂರೈಸಲು ಪ್ರಾರಂಭಿಸಿದರೆ — " ವಿದ್ಯೆ " ಹೊರೆಯಾಗದೆ ಬಾಲಕಿಯೂ ಶಾಲೆ, ಅಧ್ಯಯನಗಳ ಅದೃಷ್ಟ ಪಡೆಯುತ್ತಾಳೆ. ಬಾಲ ಕಾರ್ಮಿಕರಾಗಿ ಕೆಲಸ ಮಾಡುತ್ತಿರುವ ಬಾಲಕಿಯರು, ಮನೆಯ ಒಳಗೆ ಹೊರಗೆ ಅತ್ಯಾಚಾರಕ್ಕೆ ಒಳಗಾಗಲ್ಪಡುವ ಬಾಲಕಿಯರು — ಇವರೆಲ್ಲರ ಬಗ್ಗೆ ಈಗಿರುವ ಧೋರಣೆ, ಅಸಡ್ಡೆ, ಅನಾದರಗಳು ಮಾಯವಾಗುವ ದಿಸೆಯಲ್ಲಿ ಎಲ್ಲರೂ ಶ್ರಮಿಸಬೇಕು.

# ದ. ಏಷ್ಯಾದ ಸ್ತ್ರೀ ಸಾಹಿತ್ಯ

ಮೂಲ: ಸಂಜುಕ್ತಾ ಗುಪ್ತಾ
ಅನುವಾದ; ಗೀತಾ ಜಿ. ಎಸ್.

ಭಾರತ, ಬಾಂಗ್ಲಾದೇಶ, ಪಾಕಿಸ್ತಾನ, ನೇಪಾಳ, ಶ್ರೀಲಂಕಾ ದ. ಏಷ್ಯಾದ ಈ ಭಾಗಗಳು ಸ್ತ್ರೀಯರ ಬದುಕಿನ ಹಲವಾರು ಸಾಮಾನ್ಯ ಸಾಂಸ್ಕೃತಿಕ ಹರವುಗಳನ್ನು ಸಾಹಿತ್ಯ, ರಾಜಕೀಯ ಇತ್ಯಾದಿ ಕ್ಷೇತ್ರಗಳಲ್ಲಿ ಬಿಚ್ಚಿಡುತ್ತಿವೆ. ಸಾಹಿತ್ಯದಲ್ಲಿ ಸ್ತ್ರೀಯ ಬದುಕಿನ ಎಳೆಗಳನ್ನು ಸ್ತ್ರೀವಾದಿ ಲೇಖಕಿಯರು ಆಧುನಿಕ ಪ್ರಪಂಚದ ಸಮಸ್ಯೆಗಳ ಜೊತೆಗೆ ಪುರುಷ ಪ್ರಧಾನ ಸಮಾಜದ ಮೌಲ್ಯಗಳಲ್ಲಿ ಸ್ತ್ರೀಯ ಬದುಕಿನ ಐರನಿಯನ್ನು ಬಿಚ್ಚಿಡುತ್ತಾರೆ. ಹೀಗೆ ದ. ಏಷ್ಯಾದ ಸ್ತ್ರೀಯರ ಸಾಹಿತ್ಯ ಇತಿಹಾಸವನ್ನು ಸನ್‌ಜುಕ್ತಾ ಗುಪ್ತಾರವರು ಸಂಕ್ಷಿಪ್ತವಾಗಿ ಬರೆದಿದ್ದಾರೆ. "ಅನ್ ಹರ್ಡ್ ವರ್ಡ್ಸ್" ನಲ್ಲಿ ಪ್ರಕಟವಾದ ಲೇಖನವನ್ನು ಇಲ್ಲಿ ಕನ್ನಡಕ್ಕೆ ಅನುವಾದಿಸಿ ಸಂಕ್ಷಿಪ್ತಗೊಳಿಸಲಾಗಿದೆ.

ದ. ಏಷ್ಯಾದಲ್ಲಿ ಸಾಹಿತ್ಯ ಬರವಣಿಗೆಯ ಇತಿಹಾಸ ಸಾವಿರಾರು ವರ್ಷಗಳಿಗೂ ಹಿಂದಿನಿಂದಲೂ ನಡೆದು ಬಂದಿದೆ. ಆರಂಭ ಕಾಲದಿಂದಲೂ ವಾಕ್ ಮತ್ತು ಗಾರ್ಗಿಯಂತಹ ಬರಹಗಾರ್ತಿಯರು, ಸ್ತುತಿ, ಸ್ತೋತ್ರಗಳನ್ನು ಇನ್ನಿತರ ಕವಿಗಳೊಡನೆ ರಚಿಸುತ್ತಿದ್ದರು. ಇವು ವೇದದ ಪದ್ಯ ಶ್ಲೋಕಗಳು. ಈ ಶ್ಲೋಕಗಳಿರುವ ವೇದಗಳು ಪವಿತ್ರವಾದ, ಪುರಾತನ ಹಿಂದೂ ಸಾಹಿತ್ಯಗಳು. ಮಧ್ಯಯುಗದಲ್ಲಿಯೂ ಸಹ ವಿತಂಡವಾದಿಗಳ, ಪಂಡಿತರುಗಳ ಮೆಚ್ಚಿಗೆಗೆ ಪಾತ್ರವಾದ ಸಾಹಿತ್ಯ ರಚಿಸಿರುವಂತಹ ಲೇಖಕಿಯರಿದ್ದರು. ಮೇಲ್ವರ್ಗದ ಬಹುತೇಕ ಸ್ತ್ರೀಯರು, ಅಧ್ಯಯನ ಹಾಗೂ ಬರವಣಿಗೆಯಲ್ಲಿ ಹೆಚ್ಚಿನ ಆಸಕ್ತಿ ಹೊಂದಿದ್ದರು. ಶ್ರೀಮಂತರ ಪುತ್ರಿಯರನ್ನು ಕವನ ರಚಿಸಲು ಪ್ರೋತ್ಸಾಹಿಸಲಾಗುತ್ತಿತ್ತು. ಕವನ ರಚನೆ, ಶಿಕ್ಷಣದ ಅಂಗವೆಂದು ಪರಿಗಣಿಸಲ್ಪಟ್ಟಿತ್ತು. ಪ್ರಾಚೀನ ಯುಗ ಹಾಗೂ ಮಧ್ಯಯುಗದಲ್ಲಿ ಮೌಖಿಕ ಸಾಹಿತ್ಯ ಪರಂಪರೆಯೇ ಹೆಚ್ಚಾಗಿ ಕಂಡುಬರುತ್ತಿದ್ದು, ಅನಕ್ಷರಸ್ಥ ಮಹಿಳೆಯರೂ ಸಹ ರಚಿಸಬಹುದಾಗಿದ್ದು, ಶಾಶ್ವತವಾಗಿ ಹೆಸರು ತರುವಂತಿತ್ತು. ಸ್ತೋತ್ರಗಳನ್ನು ಹೆಣೆಯುವುದರಲ್ಲಿಯೂ ನಿಪುಣರಾಗಿದ್ದರು.

ಸುವಿಶಾಲವಾದ ದ. ಏಷ್ಯಾ ಭೂಖಂಡ ಹೆಚ್ಚು ದೇಶಗಳನ್ನು ಹೊಂದಿಲ್ಲ. ಇಲ್ಲಿನ ಮಾನವ ಸಂಕುಲದ ಸಂಸ್ಕೃತಿ, ಭಾಷೆ, ಸಂಪ್ರದಾಯ, ಧರ್ಮಗಳಲ್ಲಿ ವೈವಿಧ್ಯತೆ ಉಂಟು.

ಭಾರತ, ಬಾಂಗ್ಲಾದೇಶ, ಪಾಕಿಸ್ತಾನ, ನೇಪಾಳ ಶ್ರೀಲಂಕಾಗಳನ್ನೂ ಸೇರಿಸಿದಂತೆ ೨೩ ಪ್ರಮುಖ ಭಾಷೆಗಳಿವೆ. ಅವುಗಳಿಗೆ ಲಿಪಿಯೂ ಉಂಟು, ಅವುಗಳಲ್ಲಿ ಹೆಚ್ಚಿನವು ತಮ್ಮದೇ ಆದ ಸಾಹಿತ್ಯಿಕ ಗುಣ ಪಡೆದಿವೆ. ಈ ಭಾಷೆಗಳು ಭಾಷಾ ಶಾಸ್ತ್ರದ ಪ್ರಕಾರ ಇಂಡೋ ಆರ್ಯನ್ ಅಥವಾ ದ್ರಾವಿಡ ಪ್ರಕಾರಕ್ಕೆ ಸೇರಿದಂಥವು. ಉರ್ದು ಭಾಷೆಯು ಪಾಕಿಸ್ತಾನದ ಔದ್ಯೋಗಿಕ ಭಾಷೆ ಮತ್ತು ಭಾರತದ ಬಹುತೇಕ ಮುಸ್ಲಿಮರು ಇಂಡೋ-ಆರ್ಯನ್, ಇಂಡೊ-ಇರಾನಿಯನ್ ಜನಾಂಗಕ್ಕೆ ಸೇರಿದವರಾಗಿದ್ದು, ಇಂಡೋ-ಜರ್ಮನ್‌ನ ಪ್ರಭಾವ ಇದೆ. ಉರ್ದು ಭಾಷೆಯು ಭಾರತಕ್ಕೆ ವಾಯುವ್ಯ ಭಾಗದಿಂದ ಆಕ್ರಮಣ ಮಾಡಿದ ಸೈನಿಕರು ತಮ್ಮ ಕ್ಯಾಂಪ್‌ಗಳಲ್ಲಿ ಪ್ರಾರಂಭಿಸಿದ್ದು. ಉ. ಭಾರತದ ಭಾಷೆಗಳು ಹಾಗೂ ಪರ್ಶಿಯನ್ ಭಾಷೆಗಳ ಮಿಶ್ರಣ ಹಾಗೂ ಅರೇಬಿಕ್‌ನ ದಟ್ಟ ಪ್ರಭಾವವೂ ಇದೆ - ಈ ಭಾಷೆ ೧೭ನೇ ಶತಮಾನದ ಹೊತ್ತಿಗೆ ಸುಂದರವಾದ, ಮೆರುಗಿನ, ವಿಲಾಸಮಯ ಭಾಷೆಯಾಗಿ ಬೆಳೆದುಬಿಟ್ಟಿತ್ತು. ಉರ್ದು ಹಾಗೂ

ಮೊಘಲ್, ಲಕ್ನೋಗಳ ಆಸ್ಥಾನಗಳಲ್ಲಿ ಬಳಸಲ್ಪಟ್ಟದ್ದು ಮಧ್ಯಕಾಲೀನ ಮುಸ್ಲಿಮರ ಸಂಸ್ಕೃತಿಯಾಗಿಯೂ ಬೆಳೆದಿತ್ತು. ಆದರೆ ಇದಕ್ಕೆ ಮುನ್ನವೇ ದ. ಭಾರತದ ಮುಸ್ಲಿಮ್ ರಾಜರ ಆಸ್ಥಾನದಲ್ಲಿ ಸಾಹಿತ್ಯಭಾಷೆಯ ಸ್ಥಾನ ಪಡೆದಿತ್ತು. ಅದರ ಸಾಹಿತ್ಯಕ ಸೆಲೆ, ನುಡಿ ಗಟ್ಟಗಳು ಪರ್ಶಿಯನ್‌ಗಳಿಂದ ಒಂದವುಗಳಾಗಿದ್ದು ಡೆಲ್ಲಿಯ ಮೊಘಲ್ ಅರಸರ ಆಸ್ಥಾನ ಭಾಷೆಯಾಗಿತ್ತು.

೧೯ ನೇ ಶತಮಾನದ ಆರಂಭದ ದಶಕಗಳಲ್ಲಿ ಪ್ರಾರಂಭವಾದ ಆಧುನಿಕ ಸಾಹಿತ್ಯದ ಕಾಲವು ಪಾಶ್ಚಾತ್ಯ ತತ್ವಶಾಸ್ತ್ರ, ಸಾಹಿತ್ಯಗಳೊಂದಿಗೆ ಪೈಪೋಟಿ ನಡೆಸುತ್ತಲೇ ಬಂದಿತ್ತು, ಇದಕ್ಕೆ ಕಾರಣ ಈಸ್ಟ್ ಇಂಡಿಯಾ ಕಂಪೆನಿಯ ಬ್ರಿಟಿಷ್ ಕಾರ್ಯಾಲಯಗಳೊಂದಿಗಿನ ಸಂಪರ್ಕ ಮತ್ತು ದೇಶದ ಮಹಾನಗರಗಳಲ್ಲಿ ಕಣ್ತೆರೆದ ಇಂಗ್ಲೀಷ್ ಶಿಕ್ಷಣ ಪದ್ಧತಿ. ಈ ಹೊಸ ಶಿಕ್ಷಣ ಪದ್ಧತಿಯಿಂದ ಹೆಚ್ಚು ಲಾಭ ಪಡೆದವರು, ಮಧ್ಯಮ ವರ್ಗದ ವಿದ್ಯಾವಂತ ವರ್ಗ. ಇವರಲ್ಲಿ ಹೆಚ್ಚಿನ ಮಂದಿ ಪಾರಂಪರಿಕವಾಗಿ ಸ್ತ್ರೀಯರ ಮೇಲೆ ನಡೆದುಕೊಂಡು ಬಂದಿದ್ದ ದೌರ್ಜನ್ಯ, ಸಾಮಾಜಿಕ ಅನ್ಯಾಯಗಳನ್ನು ಅರಿತಿದ್ದು, ಪ್ರಗತಿಪರ ವಿಚಾರಗಳಿಂದ ಕೂಡಿದವರಾಗಿದ್ದರು. ೧೯ನೇ ಶತಮಾನದ ಅಂತ್ಯದ ವೇಳೆಗೆ ಸ್ವಲ್ಪ ಮಟ್ಟಿಗೆ ಸಾಮಾಜಿಕ ಸುಧಾರಣೆಯಾಗಿದ್ದರಿಂದ ಸ್ತ್ರೀಯರ ವಿದ್ಯಾಭ್ಯಾಸಕ್ಕೆ ಹೆಚ್ಚು ಗಮನ ನೀಡಲಾಗಿತ್ತು. ಮಧ್ಯಯುಗದ ಕೊನೆಯಲ್ಲಿ ಹೆಚ್ಚು ಕಡಿಮೆ ಎಲ್ಲ ವರ್ಗಗಳ ಸ್ತ್ರೀಯರೂ ಸಾಹಿತ್ಯದಿಂದ ಹೊರಗೇ ಉಳಿಯಬೇಕಾಯ್ತು. ಮೇಲ್ವರ್ಗದಲ್ಲಿಯೂ ವಿದ್ಯಾವಂತ ಮಹಿಳೆಯರ ಬಗ್ಗೆ ಒಳ್ಳೆಯ ಅಭಿಪ್ರಾಯವಿರಲಿಲ್ಲ.

ಸಮಕಾಲೀನ ಸಾಹಿತ್ಯದ ಆರಂಭದಲ್ಲಿ(೨೦ನೇ ಶತಮಾನದ ಆದಿ)ಬಹುತೇಕ ಪುರುಷ ಲೇಖಕರು ಸಾಮಾಜಿಕ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲಿದರು. ಅವರ ಕೃತಿಗಳಲ್ಲಿ ಬಾಲವಿಧವೆಯರ ದಾರುಣ ಜೀವನ, ಎಳೆ ವಯಸ್ಸಿನ ವಧುವಿನ ಮೇಲೆ ಅತ್ತೆ ಅಥವಾ ಕುಟುಂಬದ ಇನ್ನಿತರ ಸದಸ್ಯರು ನಡೆಸುವ ದಬ್ಬಾಳಿಕೆ, ಭಯಂಕರವೆನಿಸಿರುವ ವರದಕ್ಷಿಣೆ ಸಮಸ್ಯೆ, ಬಹುಪತ್ನಿತ್ವ ಇತ್ಯಾದಿಗಳನ್ನು ಕಾಣಬಹುದಾಗಿತ್ತು.

ನೋವುಂಡ ಮಹಿಳೆಯರ ಬಗ್ಗೆ ಮಾನವೀಯ ಅನುಕಂಪ ತೋರಿಸಿದ ಕಥೆಗಾರರು ತಮ್ಮ ಗ್ರಂಥಗಳಲ್ಲಿ ಆದರ್ಶೀಕರಿಸುತ್ತಿದ್ದುದು ರಕ್ಷಕಳಾದ, ತ್ಯಾಗ ಮನೋಭಾವದ, ಆತ್ಮಾರ್ಪಣೆ ಸ್ವಭಾವದ ತಾಯಿ ಇಲ್ಲವೇ ತನ್ನತನವನ್ನೇ ಬಿಟ್ಟುಕೊಡುವಂಥ ಔದಾರ್ಯದ ಕಷ್ಟ ಸಹಿಷ್ಣುವಾದ ಪತಿಸಾಶತಿಯರನ್ನು. ಜೀವನದ ಎಂಥ ಕಷ್ಟಗಳನ್ನೂ ನಗುನಗುತ್ತ, ತಾಳ್ಮೆಯಿಂದ ಎದುರಿಸುವುದೇ ಮಹಿಳೆಯರ ಧರ್ಮ ಮತ್ತು ದೃಢತೆ ಎಂದು ಪ್ರತಿಪಾದಿಸಲಾಗಿತ್ತು. ರಾಮಾಯಣದ ರಾಮನ ರಾಣಿ ಸೀತಾ–ಆದರ್ಶ ನಾರೀಮಣಿಯೆನಿಸಿದ್ದಳು. ಸ್ತ್ರೀಯರ ವಿಮೋಚನೆ ಪುರುಷರಿಂದಲೇ ಎಂದು ಪರಿಗಣಿಸಲ್ಪಟ್ಟದ್ದು, ಜೀವನದ ಪರಿಮಿತದಲ್ಲಿ ಅವರು ಅನುಭವಿಸುವ ಸಂಕಷ್ಟಗಳನ್ನು ಅವರ ಹಣೆಬರಹ, ಕರ್ಮ ಎಂದು ಹೇಳಲಾಗುತ್ತಿತ್ತು.

**ಆಧುನಿಕ ಕಾಲದ ಸಾಹಿತ್ಯದಲ್ಲಿ ಸ್ತ್ರೀಯರ ಕಲ್ಪನೆಗಳು:**

ಆಧುನಿಕ ಸಾಹಿತ್ಯದ ಆರಂಭ ಕಾಲದಲ್ಲಿ ಗಣನೆಗೆ ತೆಗೆದುಕೊಳ್ಳುವಂತಹ ಕವಯಿತ್ರಿಯರು ಕಂಡುಬರುತ್ತಾರೆ. ಇವರಲ್ಲಿ ಕಾದಂಬರಿಕಾರ್ತಿಯರು, ಸಣ್ಣಕಥೆಗಾರ್ತಿಯರು ಎರಡು ಬಣಗಳಿದ್ದವಲ್ಲದೆ ಅವರ ಸಾಹಿತ್ಯದಲ್ಲಿ ಆಧುನಿಕ ಸಾಹಿತ್ಯದ ಪರಿಣಾಮವನ್ನೂ ನೇರವಾಗಿ ಕಾಣಬಹುದಾಗಿತ್ತು. ಈ ಲೇಖಕಿಯಲ್ಲಿ ಬಹಳ ಮಂದಿ ಅಂದಿನ ಸಮಾಜದ ಆಗು ಹೋಗುಗಳನ್ನು ಎತ್ತಿ ಹಿಡಿಯುತ್ತಿದ್ದರು. ಅಂದಿನ ಬಾಲವಿಧವೆಯರನ್ನು ಹಾಗೂ ಅಸಡ್ಡೆಗೊಳಗಾದ ಪತ್ನಿಯರು ಆ ಲೇಖಕಿಯರ ಕಲ್ಪನೆಯಲ್ಲಿ ಆ ಸ್ತ್ರೀಯರು ಕಷ್ಟ ಸಹಿಷ್ಣತೆ, ಯಾವುದನ್ನೂ ವಿರೋಧಿಸದ ಸಹನೆ, ಅಷ್ಟೇ ಅಲ್ಲದೆ ಬಡತನದ ಕಷ್ಟ, ಆಶಾ ಭಂಗಗಳನ್ನು ದೇವರ ಸೇವೆ ಅಥವಾ ಕುಟುಂಬದ ಒಳಿತಿಗೆಂದು ಧರ್ಮೀಕರಣಗೊಳಿಸುವ ಚಿತ್ರಗಳಾಗಿದ್ದವು. ಇದೇ ಅವರ ಪರಮ ಕರ್ತವ್ಯವೆಂದು ಭಾವಿಸಲಾಗಿತ್ತು. ಪುರುಷ ಲೇಖಕರಂತೆಯೇ ಲೇಖಕಿಯರೂ ಸಹ ಆದರ್ಶ ಮಾತೃತ್ವಕ್ಕೆ ಅತ್ಯುಚ್ಚ ಸ್ಥಾನ ನೀಡಿದರು, ಲೇಖಕಿಯರಲ್ಲಿ ಹೆಚ್ಚಿನವರು ಒಂದೋ ಗೃಹಿಣಿಯರು ಇಲ್ಲವೇ ವಿಧವೆಯರಾಗಿರುತ್ತಿದ್ದುದರಿಂದ ಪುರುಷ ಪ್ರಧಾನ ಸಮಾಜದ ಆದರ್ಶ, ಮೌಲ್ಯಗಳನ್ನು ಮೀರಿ ಹೋಗುವುದು ಅಸಾಧ್ಯವೆನಿಸಿತ್ತು. ತನ್ನ

ಉಳಿವಿಗಾಗಿ, ವ್ಯವಸ್ಥೆಯೊಡನೆ ರಾಜಿ ಮಾಡಿಕೊಳ್ಳಬೇಕಾಗಿತ್ತು. ಈ ಮಾತು ಪ್ರತಿ ಹೆಣ್ಣಿಗೂ ಅನ್ವಯಿಸುವಂತಿದ್ದರೂ ತನ್ನ ರಕ್ಷಣೆಗೆ ಪತಿಯೂ ಇಲ್ಲದ, ಪುತ್ರನೂ ಇಲ್ಲದ ಸ್ತ್ರೀಗೆ ಹೆಚ್ಚಾಗಿ ಅನ್ವಯವಾಗುತ್ತಿದ್ದುದು, ಕೌಟುಂಬಿಕ ರೀತಿ-ನೀತಿಗಳಿಗೆ ಬಲಿಪಶುವಾದಂಥ ಸ್ತ್ರೀಯರ ರಕ್ಷಣೆಗೆ ಮಹಿಳೆಯರ ಒಳಿತಿಗಾಗಿ ಕೆಲಸ ಮಾಡುವ ಸ್ತ್ರೀ ಸಂಘಟನೆಗಳೂ ಸಹ ಹಿಂದೂ ಮುಂದು ನೋಡುತ್ತಿದ್ದವು. ಸ್ತ್ರೀಯರಿಗೆ ಸ್ವಾತಂತ್ರ್ಯವಾಗಲಿ, ತಮ್ಮ ಜೀವನದ ಪ್ರಮುಖ ನಿರ್ಧಾರಗಳನ್ನು ಕೈಗೊಳ್ಳುವ ಹಕ್ಕಾಗಲಿ ಇರಲಿಲ್ಲ. ಹೆತ್ತವರಿಗೆ, ಕುಟುಂಬದ ಉಳಿದ ಸದಸ್ಯರಿಗೆ ಹೆಣ್ಣು ಮಗುವಿನ ಜನನ-ಸಂತಾಪದ ಸಂಗತಿಯೆನಿಸಿತ್ತು. ವಿವಾಹದ ವಿಧಿಗಳು ಬಹಳ ಕಠಿಣವಾಗಿತ್ತಾದರೂ, ಅಂದಿನ ಸಾಮಾನ್ಯ ಭಾವನೆಯಲ್ಲಿ (ಸ್ತ್ರೀಯರನ್ನೂ ಸೇರಿಸಿ), ಮಹಿಳೆ ತನ್ನ ಜೀವನ ಹಾಗೂ ಶೀಲಗಳನ್ನು ಕಾಪಾಡಿಕೊಳ್ಳಲೇಬೇಕು ಎಂದಿದ್ದರೆ ಆಕೆ ಸಾಧ್ಯವಾದಷ್ಟು ಬೇಗ ಮದುವೆಯಾಗಿ ಪತಿಯ ರಕ್ಷಣೆಯ ನೆರಳಲ್ಲಿ ಇರಬೇಕಿತ್ತು.

ಬಾಲಕಿ ಋತುಮತಿಯಾಗುವ ಮುನ್ನವೇ ವಿವಾಹ ವಿಧಿಗೊಳಪಡುವುದು ಆಕೆಯ ಪವಿತ್ರ ಕನ್ಯತ್ವದ ಪ್ರತೀಕವೆಂದು ಪರಿಗಣಿಸಲ್ಪಟ್ಟಿದ್ದರಿಂದ ೧೦ ವರ್ಷಕ್ಕೆ ಮುನ್ನವೇ ವಧು ಪಟ್ಟವನ್ನು ಅಲಂಕರಿಸಬೇಕಿತ್ತು. ಹೆಣ್ಣು ಶಿಶುವಿನ ಹತ್ಯೆ, ಹೆಣ್ಣು ಮಕ್ಕಳ ಬಗೆಗಿನ ಅಲಕ್ಷ್ಯ, ಅನಾಗರೀಕ ವೈವಾಹಿಕ ಒಡಂಬಡಿಕೆಗಳು ಸರ್ವೇ ಸಾಮಾನ್ಯವಾಗಿದ್ದವು. ಅಂದಿನ ಸ್ತ್ರೀಯರ ಅಸಹಾಯಕತೆ ಮತ್ತು ಆರ್ಥಿಕವಾಗಿ ಯಾವುದೇ ಸ್ವಾತಂತ್ರ್ಯವಿಲ್ಲದಿದ್ದುದರಿಂದ, ವಿವಾಹಿತ ಮಹಿಳೆಯ ಜೀವನ ಅವಿಭಕ್ತ ಕುಟುಂಬಗಳಲ್ಲಿ ಗುಲಾಮಗಿರಿಗಿಂತ ಉತ್ತಮ ಎಂದು ಭಾವಿಸಲ್ಪಟ್ಟಿತ್ತಾದರೂ, ಆಕೆಗೆ ಗಂಡನ ಹಾಗೂ ಮಕ್ಕಳ ಅನುಕಂಪದ ನೆರವಿನ ಅಗತ್ಯವಿತ್ತು. ಅಂದಿನ ಮಹಿಳೆಯರ ಏಕೈಕ ಗುರಿ ಗಂಡುಮಗುವಿನ ತಾಯಿಯಾಗುವುದು. ಹಾಗಾಗಿಯೇ ಮಕ್ಕಳಿಲ್ಲದ ವಿಧವೆಯರು ಆತ್ಮಹತ್ಯೆಗೆ ಎಳಸುತ್ತಿದ್ದುದು ಸರ್ವೇಸಾಮಾನ್ಯದ ಸಂಗತಿಯಾಗಿತ್ತು. ಎಷ್ಟೋ ವೇಳೆ ಬಲವಂತದಿಂದ ಆತ್ಮಹತ್ಯೆಗೆ ಪ್ರಚೋದಿಸಲಾಗುತ್ತಿತ್ತು. ಬಾಲ್ಯವಿವಾಹ ಮತ್ತು ಬಹುಪತ್ನಿತ್ವದ ಫಲವಾಗಿ ಬಹಳ ಮಂದಿ ವಿಧವೆಯರು ಕಂಡವರ ಮನೆಯ ಆಳಾಗಿಯೇ ಜೀವನ ನಡೆಸುತ್ತಿದ್ದರು. ಈ ಅನ್ಯಾಯವನ್ನು ಯಾವ ಕಾನೂನೂ ತಡೆಗಟ್ಟದಿದ್ದರು ವಿಧವಾ ವಿವಾಹ ಮಾತ್ರ ನಿಷೇಧಿಸಲ್ಪಟ್ಟಿತ್ತು. ಸಾಮಾಜಿಕವಾಗಿ ಈ ಪರಿಸ್ಥಿತಿ ಕೇವಲ ಮೇಲ್ವರ್ಗ ಹಾಗೂ ಮಧ್ಯಮ ವರ್ಗದಲ್ಲಿ ಮಾತ್ರವೇ ಕಂಡು ಬರುತ್ತಿದ್ದುದು. ಬಡತನದ, ಕೆಳವರ್ಗದ ಕುಟುಂಬಗಳಲ್ಲಿಯೂ ಪುರುಷ ದಬ್ಬಾಳಿಕೆಯಿದ್ದಿದ್ದರೂ ಬೇರೆ ರೀತಿಯಲ್ಲಿ ವ್ಯಕ್ತವಾಗುತ್ತಿತ್ತು.

೧೯೩೦ ರ ಚಳುವಳಿಗಳ ಸಮಯದಲ್ಲಿ ಮಹಿಳೆಯರ ಶೋಷಣೆ ಗಮನ ಸೆಳೆದಿದ್ದವಾದ್ದರಿಂದ ಸ್ತ್ರೀಯರ ಬೌದ್ಧಿಕ ಬೆಳವಣಿಗೆಯೆಡೆಗೂ ಸ್ವಲ್ಪ ಗಮನ ನೀಡಲ್ಪಟ್ಟಿತು. ಆಗ ಬಹಳಷ್ಟು ಜನ ಕವಯಿತ್ರಿಯರಿದ್ದರು. ರಾಧಾರಾಣಿ ದೇವಿ- ಈಕೆ ಅಪರಾಜಿತಾ ದೇವಿ ಎಂಬ ಮಿಥ್ಯಾನಾಮದಡಿಯಲ್ಲಿ ಕವಿತೆಗಳನ್ನು ರಚಿಸುತ್ತಿದ್ದರು. ರಾಧಾರಾಣಿ ದೇವಿಯವರ ಕವಿತೆಗಳು ಅಂದಿನ ಸ್ಥಿತಿಮಾನಕ್ಕೆ ಅತ್ಯಂತ ವಿರೋಧಿಯಾಗಿದ್ದು, ಸ್ತ್ರೀಯರೂ ಕೂಡ ಮಾನವಕುಲದವರೇ ಎಂದು ಪ್ರತಿಪಾದಿಸುತ್ತಿದ್ದು, ಸಂಪ್ರದಾಯದ ಹೆಸರಿನಲ್ಲಿ ಹೆಂಗಸರ ಮೇಲೆ ನಡೆಯುತ್ತಿದ್ದ ಅನ್ಯಾಯ, ದೌರ್ಜನ್ಯಗಳನ್ನು ಪ್ರಶ್ನಿಸಿದ್ದವು. ಹಾಗಾಗಿ ಕಟು ವಿಮರ್ಶೆಗಳನ್ನು, ಟೀಕೆಗಳನ್ನು ಆಕೆ ಎದುರಿಸಬೇಕಾಯಿತು.

## ಬದಲಾದ ಸಾಮಾಜಿಕ, ರಾಜಕೀಯ ಹಾಗೂ ಆರ್ಥಿಕ ನೆಲೆಗಟ್ಟಿನಲ್ಲಿ:

೧೯೪೦ ರ ದಶಕದಲ್ಲಿ, ಹಾಗೂ ದ. ಏಷ್ಯಾದ ದೇಶಗಳಿಗೆ ಸ್ವಾತಂತ್ರ್ಯ ದೊರಕಿದ ಹಿನ್ನಲೆಯಲ್ಲಿ ಸ್ತ್ರೀ ಸಾಹಿತಿಗಳಿಗೆ ಹೊಸ ಆಶಾಕಿರಣ ಮೂಡಿದಂತಾಯಿತು. ಸಮಕಾಲೀನ ಲೇಖಕರೊಂದಿಗೆ ಲಿಂಗಭೇದವಿಲ್ಲದೆ ಸ್ವಂತ ನೆಲೆಗಟ್ಟಿನಲ್ಲಿ ಕೆಲಸ ಮಾಡಲು ಪ್ರಾರಂಭಿಸಿದ್ದರು. ಸ್ವತಂತ್ರ ಭಾರತದ ಸಂವಿಧಾನವು ಹಿಂದೂ ಮಹಿಳೆಯರಿಗೆ ರಾಜಕೀಯ ಸಮಾನತೆ, ಸಮಾನ ವೇತನ, (ಏಕ ಪತಿ ಯ ಕಾಯ್ದೆ) ಬಹು ಪತ್ನಿತ್ವದ ನಿಷೇಧ, ವಿವಾಹ ವಿಚ್ಛೇದನದಂತಹ ಸಾಮಾಜಿಕ ಸುಧಾರಣೆಗಳಿಗೆ ಕಾನೂನು ಮಾಡಿತ್ತು. ಮೇಲಾಗಿ ನಗರೀಕರಣವೂ ಶೀಘ್ರವಾಗಿ ಬೆಳೆದು ಬರುತ್ತಿದ್ದು

ದರಿಂದ, ಮಧ್ಯಮ ವರ್ಗದ ಹೆಚ್ಚು ಹೆಚ್ಚು ಸ್ತ್ರೀಯರು ಕುಟುಂಬದ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಲು ನಾಲ್ಕು ಗೋಡೆಗಳ ಎಲ್ಲೆ ದಾಟಿ ಹೊರ ಪ್ರಪಂಚಕ್ಕೆ ಬರಲೇಬೇಕಾಗಿತ್ತು-ವಿದ್ಯೆಗಾಗಿ ಆ ಮೂಲಕ ಉದ್ಯೋಗಕ್ಕಾಗಿಯೂ ಸಹ. ಇದರ ಫಲವಾಗಿ ಭಾರತೀಯ ಸಾಹಿತ್ಯದಲ್ಲಿ ಮಹತ್ವವೆನಿಸಿದಂತಹ ಕೃತಿಗಳ ಲೇಖಕಿಯರ ಸಂಖ್ಯೆಯಲ್ಲಿಯೂ ಹೆಚ್ಚಳವಾಯಿತು. ಇವರಲ್ಲಿಯೂ ಬಹಳ ಮಂದಿ ಉನ್ನತ ವಿದ್ಯಾವಂತೆಯರು, ಪಾಶ್ಚಾತ್ಯ ಸಾಹಿತ್ಯದಲ್ಲಾದ ಸಾಮಾಜಿಕ, ಜಾಗತಿಕ ಬದಲಾವಣೆಯ ಅರಿವಿದ್ದವರು, ಅವರೆಲ್ಲ ಅಧ್ಯಯನ, ಪ್ರವಾಸದ ಅನುಭವವಿದ್ದ, ಪ್ರಗತಿಪರ ವಿಚಾರದ ಮುಕ್ತ ಮನೋಭಾವದವರಾಗಿದ್ದವರು. ಉದಾ:-ಪಶ್ಚಿಮ ದೇಶದಲ್ಲಿ ನೆಲೆಸಿದ್ದ ಕಮಲಾ ಮಾರ್ಕಂಡೇಯ ಮತ್ತು ಉಷಾ ಪ್ರಿಯಂವದಾ, ಚಿತ್ರಾ ಫರ್ನಾಂಡೋ(ಶ್ರೀಲಂಕಾ), ಅನಿತಾ ದೇಸಾಯಿ(ದೆಹಲಿ) ಇವರು ಆಂಗ್ಲ ಭಾಷೆಯಲ್ಲಿ ಪ್ರಮುಖವಾಗಿ ಹೆಸರಿಸಬಹುದಾದಂತಹ ಲೇಖಕಿಯರು.

ಸಾಂಪ್ರದಾಯಿಕವಾಗಿ ಸ್ತ್ರೀಯರು ಕವನ ರಚನೆಯನ್ನೇ ಒಗ್ಗಿಸಿಕೊಂಡಿದ್ದರೂ, ಗದ್ಯವನ್ನು ತಮ್ಮ ಸಾಹಿತ್ಯದ ಅಭಿವ್ಯಕ್ತಿಗೆ ಆರಿಸಿಕೊಂಡವರಿದ್ದಾರೆ. ಗದ್ಯಮಾಧ್ಯಮಲ್ಲೂ ಸಹ ಸಾಮಾನ್ಯವಾಗಿ ಪ್ರಬಂಧಗಳು ಮತ್ತು ಕಾದಂಬರಿಗಳ ರಚನೆಗೇ ಲೇಖಕಿಯರು ಆಕರ್ಷಿತರಾಗುತ್ತಿದ್ದರು ಹೆಚ್ಚಾಗಿ. ಅಮೃತಾ ಪ್ರೀತಂ, ನಬನೀತಾ ದೇಬ್‌ಸೇನ್‌ರಂಥಹ ಪ್ರತಿಭಾನ್ವಿತ ಲೇಖಕಿಯರು ಪ್ರಾರಂಭದಲ್ಲಿ ಕವಯಿತ್ರಿಯರಾಗಿದ್ದರೂ ನಂತರ ಗದ್ಯ ಮಾಧ್ಯಮಕ್ಕೇ ಹೆಚ್ಚು ಅಂಟಿಕೊಂಡವರು. ಕಾರಣ ಗದ್ಯ-ಜನಪ್ರಿಯ ಮಾತ್ರವಲ್ಲ ಪ್ರಭಾವಶಾಲಿಯೂ ಹೌದಾದ್ದರಿಂದ. ಮೇಲೆ ಹೆಸರಿಸಿದಂಥ ಹಲವಾರು ಲೇಖಕಿಯರು, ವಿಶ್ವವಿದ್ಯಾಲಯದಲ್ಲಿ ಬೋಧಕ ವೃತ್ತಿಯಲ್ಲಿದ್ದವರು. ಪ್ರಸ್ತುತ ಪರಿಸ್ಥಿತಿಯಲ್ಲಿ ಮಹಿಳೆಯರು ಎದುರಿಸುತ್ತಿರುವ ಸಮಸ್ಯೆಗಳ ಅರಿವಿದ್ದವರು ಮತ್ತು ವಿಶ್ವದೆಲ್ಲೆಡೆ ಸಾಗುತ್ತಿರುವ ಮಹಿಳಾ ಚಳುವಳಿಗಳ ಬೆಳವಣಿಗೆಗಳನ್ನು ಗಮನವಿಟ್ಟು ತಿಳಿದುಕೊಳ್ಳುತ್ತಿದ್ದವರು. ಬಹುಮಂದಿ ಲೇಖಕಿಯರು ಸ್ತ್ರೀವಾದಕ್ಕೆ ಮನಸೋತರು, "ಮಾನುಷಿ" ಯಂಥ ಪತ್ರಿಕೆಗ

---

## ತಾನೇ ಕಲಿತ—ದುರ್ಗಾಬಾಯಿ ದೇಶ್‌ಮುಖ್

ಶಾಲೆಗೆ ಕಳುಹಿಸಲು ಮನೆಯವರು ಒಪ್ಪದಾಗ ಆಕೆ ಮನೆಯಲ್ಲಿಯೇ ಹಿಂದೀ ಕಲಿತರು. ಮುಂದೆ ಬಾಲಕಿಯರ ಶಾಲೆಯೊಂದನ್ನು ತಾವೇ ಪ್ರಾರಂಭಿಸಿದರು. ಆಕೆಯ ನಿಷ್ಠೆಯನ್ನು ಮೆಚ್ಚಿ ಗಾಂಧೀಜೀ ಚಿನ್ನದ ಪದಕ ಕೊಟ್ಟರು. ಹೀಗೆ ಸ್ವ ಪ್ರಯತ್ನದಿಂದ ಉನ್ನತಿ ಪಡೆದವರು. ದುರ್ಗಾಬಾಯಿ ದೇಶ್‌ಮುಖ್ 1909 ಜುಲೈ 15 ರಂದು ಆಂಧ್ರದ ರಾಜಮಹೇಂದ್ರಿಯಲ್ಲಿ ಹುಟ್ಟಿ ರಾಜಕೀಯ ಚಟುವಟಿಕೆಯಲ್ಲಿ ಆಸಕ್ತಿಯಿದ್ದ ತಾಯಿಯ ಪ್ರಭಾವದಿಂದ ದುರ್ಗಾ ಎಳೆ ವಯಸ್ಸಿನಲ್ಲೇ ರಾಜಕೀಯ ರಂಗವನ್ನು ಪ್ರವೇಶಿಸಿದರು. ಸ್ವಾತಂತ್ರ್ಯ ಚಳುವಳಿಯಲ್ಲಿ ಪಾತ್ರ ವಹಿಸಿದರು. ಉಪ್ಪಿನ ಸತ್ಯಾಗ್ರಹದಲ್ಲಿ 3 ವರ್ಷ ಸೆರೆಮನೆ ವಾಸವೂ ಆಯಿತು. ಆ ಅವಧಿಯಲ್ಲಿ ತಮ್ಮ ಶಿಕ್ಷಣ ಮುಂದುವರೆಸಿ ಇಂಗ್ಲೀಷ್ ಕಲಿತರು. ಅನಂತರ ಕಾಲೇಜು ಸೇರಿ ಬಿ. ಎ. ಬಿ. ಎಲ್. ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಮದ್ರಾಸಿನಲ್ಲಿ ವಕೀಲರಾದರು. ರಾಜ್ಯಾಂಗ ರಚನಾ ಸಭೆಯ ವಿವಿಧ ಪ್ರಮುಖ ಸಮಿತಿಗಳಲ್ಲಿ ದುರ್ಗಾಬಾಯಿ ಕೆಲಸ ಮಾಡಿದರು. ರಾಜಕೀಯದಂತೆ ಸಮಾಜ ಸೇವೆಯಲ್ಲೂ ಆಸಕ್ತಿ. ಸ್ತ್ರೀಯರ ವಿದ್ಯಾಭ್ಯಾಸವನ್ನು ಕುರಿತು ರಾಷ್ಟ್ರೀಯ ಸಮಿತಿಯ ನಾಯಕತ್ವ ಕೌನ್ಸಿಲ್, ಫಾರ್ ಸೋಷಿಯಲ್ ಡೆವಲಪ್‌ಮೆಂಟ್‌ನ ನಿರ್ದೇಶಕ ಹುದ್ದೆ ಇವರಿಗೆ ಲಭಿಸಿದುವು. ಮದ್ರಾಸಿನ ಅಖಿಲ ಭಾರತ ಸಮಾಜ ಕಲ್ಯಾಣ ಮಂಡಲಿ ಅಧ್ಯಕ್ಷರಾಗಿ, ಸ್ತ್ರೀಯರ ಮತ್ತು ಮಕ್ಕಳ ಹಿತ ಸಾಧನೆಗಾಗಿ ವಿಶೇಷ ಶ್ರಮ ವಹಿಸಿ ಕೆಲಸ ಮಾಡಿದರು. ಮದ್ರಾಸಿನ ಆಂಧ್ರ ಮಹಿಳಾ ಸಭಾದ ಸ್ಥಾಪಕ ಸದಸ್ಯೆಯಾಗಿ ಆ ಸಂಸ್ಥೆಯನ್ನು ಬಹು ಮುಖವಾಗಿ ಬೆಳೆಸಿದರು. ಆ ಸಂಸ್ಥೆ ಆಶ್ರಯದಲ್ಲಿ ನರ್ಸಿಂಗ್ ಹೋಂ, ಶಾಲೆ, ನರ್ಸ್‌ಗಳು ಮತ್ತು ಉಪಾಧ್ಯಾಯಿನಿಯರಿಗೆ ತರಬೇತಿ ಕೇಂದ್ರಗಳು, ಕಾಲೇಜು ಹಾಗೂ ವೃತ್ತಿ ಶಿಕ್ಷಣ ಶಾಲೆಗಳು ನಡೆಯಲು ಏರ್ಪಾಟು ಮಾಡಿದರು. ಅವರು ಭಾರತದ ರೆಡ್ ಕ್ರಾಸ್ ಸೊಸೈಟಿ ಸದಸ್ಯೆ ಕೂಡ. ದುರ್ಗಾ ತೆಲಗು ಮತ್ತು ಇಂಗ್ಲೀಷ್‌ನಲ್ಲಿ ಉತ್ತಮ ವಾಗ್ಮಿ. ಅವರದು ಪ್ರಭಾವಶಾಲೀ ವ್ಯಕ್ತಿತ್ವ 1952 ರಲ್ಲಿ ಸಿ. ಡಿ. ದೇಶ್‌ಮುಖ್ ಅವರು ದುರ್ಗಾಬಾಯಿಯವರನ್ನು ವಿವಾಹವಾದರು.

ಡಿ. ಮಧುನಗರ್ಲೆ

ಳನ್ನು ಬೆಳಕಿಗೆ ತರುವುದರ ಮೂಲಕ ತಮ್ಮ ದೇಶದಲ್ಲಿಯೇ ಬಿಡುಗಡೆಯ ಹೊಸಗಾಳಿಗೆ ಕಾರಣರಾದರೆನ್ನಬಹುದು.

**ಆಧುನಿಕ ಸಾಹಿತ್ಯದಲ್ಲಿ ಸ್ತ್ರೀಯರು ಹಾಗೂ ಅವರ ಸಮಸ್ಯೆಗಳು:—**

ದ. ಏಷ್ಯಾದ ಸ್ತ್ರೀ ಹೋರಾಡಬೇಕಿರುವುದು ಒಂದೆರಡು ಸಮಸ್ಯೆಗಳ ವಿರುದ್ಧವಲ್ಲ, ಅವಳ ಮುಂದೆ ಇರುವ ಸಮಸ್ಯೆಗಳು ಅಪಾರ. ಅವುಗಳಲ್ಲಿ ತೃತೀಯ ಜಗತ್ತಿನ ಪ್ರಮುಖ ಲಕ್ಷಣವೆನ್ನಬಹುದಾದ ಬಡತನವೂ ಒಂದು, ಧರ್ಮ, ಸಂಪ್ರದಾಯಗಳ ಸಂಕೋಲೆಗಳ ಜೊತೆಗೆ, ಇತರ ಪುರುಷ ಪ್ರಧಾನ ಸಮಾಜಗಳಲ್ಲಿ ಕಂಡುಬರುವ ತೊಂದರೆಗಳು. ಹೆಚ್ಚಿನ ಲೇಖಕಿಯರು ಮಧ್ಯಮ ಹಾಗೂ ಮೇಲ್ವರ್ಗದ ಸಮಾಜದ ಕಷ್ಟ ನಷ್ಟಗಳನ್ನು ಕುರಿತು ಬರೆದವರಾಗಿದ್ದರೂ, ಗಾಂಧಿವಾದ, ಮಾರ್ಕ್ಸ್ ಸಿದ್ಧಾಂತದ ಪ್ರಭಾವಕ್ಕೊಳಗಾದ, ಪ್ರಗತಿಪರ ವಿಚಾರಧಾರೆ ಹೊಂದಿದ ಆಧುನಿಕ ಲೇಖಕಿಯರು ಸಮಾಜದ ಕೆಳವರ್ಗದ, ಕಾರ್ಮಿಕರ, ಬಡವರಲ್ಲಿ ಬಡವರಾದವರ ಸಮಸ್ಯೆಗಳನ್ನು ವಿಶ್ಲೇಷಿಸಿದ್ದಾರೆ, ಇವರಲ್ಲಿ ಬಹುತೇಕ ಲೇಖಕಿಯರು ಮಹಿಳೆಯರನ್ನೇ, ಅವರ ಸಮಸ್ಯೆಗಳನ್ನೇ ಮುಂದಿಟ್ಟುಕೊಂಡು ಬರೆದವರು.

ಚಿತ್ರಾ ಫರ್ನಾಂಡೋರವರ "ಮಿಸಿಲಿನ್" (೧೯೮೧) ಕೃತಿಯಲ್ಲಿ ಶ್ರೀಲಂಕಾದ ಕೊಲೊಂಬೋ ನಗರದ ಮಧ್ಯಮವರ್ಗದ ಕುಟುಂಬವೊಂದರಲ್ಲಿ ಆಕೆ ಹಳ್ಳಿಯ ಬಡ ಹೆಂಗಸು. ಅಡಿಗೆಯವಳಾಗಿ ದುಡಿಯುತ್ತಿದ್ದಳು. ಅವಳ ಹಳ್ಳಿಯಲ್ಲಿ ಅವಳಿಗೆ ತನ್ನದೇ ಆದ ವ್ಯಕ್ತಿತ್ವವಿತ್ತು, ತನ್ನದೆನ್ನುವವೂ ಇದ್ದವು. ಕೊಲೊಂಬೋದಲ್ಲಿ ಆಕೆಯದು ಭಿನ್ನ ಪರಿಸ್ಥಿತಿ, ಆಕೆಯ ದುಡಿತ ಆಕೆಯ ವ್ಯಕ್ತಿತ್ವವನ್ನೇ ನುಂಗಿಬಿಟ್ಟಿತ್ತು. ಆ ಮನೆಯವರ ಮಟ್ಟಿಗೆ ಆಕೆ ಸದಸ್ಯಳೆಂದು ಪರಿಗಣಿಸಲ್ಪಡದೆ, ಕೇವಲ "ಉಪಯುಕ್ತ ಸಾಧನ" ವೆನಿಸಿದ್ದಳಷ್ಟೇ. ಹಾಗೆಂದು ಅವರೆಲ್ಲ ಕ್ರೂರಿಗಳೂ ಅಲ್ಲ, ಭಾವನಾರಹಿತರೂ ಅಲ್ಲ. ಇಂತಹ "ಮಿಸಿಲಿನ್" ಪಾತ್ರಗಳು ಆಧುನಿಕ ನಗರಗಳಾದ ಕಲ್ಕತ್ತೆ, ಬಾಂಬೆ, ಡೆಲ್ಲಿಗಳಲ್ಲಿ ಕಂಡುಬರುತ್ತವೆ.

ಇಸ್ಮತ್ ಚುಗ್ತಾಯ್‌ರವರೂ ಸಹ ಅಲಕ್ಷ್ಯಕ್ಕೊಳಗಾಗಿ, ಯಾರಿಗೂ ಬೇಡವಾದ ಬಡ ಜೀವಿಗಳನ್ನು ಹೆಚ್ಚಾಗಿ ವರ್ಣಿಸಿರುತ್ತಾರೆ. ಅವರ "ಟೈನೀಸ್ ಗ್ರಾನೀ" (೧೯೭೬) ಕೃತಿಯ ನಾಯಕಿ ಒಬ್ಬ ಮುಸ್ಲಿಂ ಮಹಿಳೆ, ಆಕೆಯ ಸುತ್ತಮುತ್ತಲಿನವರೂ ಎಂದೂ ಆಕೆಯೂ ಕೂಡ ಒಬ್ಬ ವ್ಯಕ್ತಿಯೆಂದು ಪರಿಗಣಿಸಿ, ನಡೆಸಿಕೊಂಡಿರುವುದಿಲ್ಲ.

ಶಾಂತ ರಾಮರಾವ್ ಹಲವಾರು ವರ್ಷಗಳವರೆಗೆ ಇಂಗ್ಲೆಂಡ್‌ನಲ್ಲಿ ವಾಸಿಸಿದವರು, ಆತ್ಮಕಥನದಂತಿರುವ ಆಕೆಯ ಕಥೆಗಳು- "ಹೋಮ್ ಟು ಹೋಂ" ಮತ್ತು "ಗಿಫ್ಟ್ಸ್ ಆಫ್ ಪ್ಯಾಸೇಜ್" ಹಾಗೂ "ರಿಮೆಂಬರ್ ದ ಹೌಸ್" ಕಾದಂಬರಿಯಲ್ಲಿ ಭಾರತೀಯತೆಯ ಅರಿವನ್ನು ಹೆಮ್ಮೆಯಿಂದಲೇ ಪ್ರದರ್ಶಿಸಿದ್ದಾರೆ. ಉಳಿದೆಲ್ಲ ಸಮಕಾಲೀನ ಸಾಹಿತಿಗಳಂತೆಯೇ ಆಕೆಯೂ ಸಹ ಪ್ರತ್ಯೇಕ ಆಧುನಿಕತೆಯನ್ನು ಮೈಗೂಡಿಸಿಕೊಂಡವರು ಹಾಗೂ ಸಂಪ್ರದಾಯ ಬದ್ಧತೆ ಹಾಗೂ ಸಂಕುಚಿತ ಮನೋಭಾವ, ನಂಬಿಕೆಗಳಿಂದ ಜನಿಸಿದ ತಮ್ಮ ಸ್ವಾತಂತ್ರ್ಯ ಪ್ರಜ್ಞೆಯನ್ನು ಬಿಟ್ಟುಕೊಡದೆ ಪ್ರತಿಪಾದಿಸಿಕೊಳ್ಳುತ್ತಾರೆ. "ನೆಕ್ಟರ್ ಇನ್ ಸೀವ್" (೧೯೫೪), "ಎ ಸೈಲೆನ್ಸ್ ಆಫ್ ಡಿಸೈರ್" (೧೯೬೦)ರ ಬರಹಗಾರ್ತಿಯಾದ ಕಮಲಾ ಮಾರ್ಕಂಡೇಯ ತಮ್ಮ ಗ್ರಂಥಗಳಲ್ಲಿ ಬಡ ಕುಟುಂಬಗಳ ಆಶಾಭಂಗಗಳನ್ನು ಅರ್ಥಮಾಡಿಕೊಂಡು, ಅನುಕಂಪದ ಸೆಲೆಯಲ್ಲಿ ಚಿತ್ರಿಸಿದ್ದಾರೆ.

ಆಶಾಪೂರ್ಣ ದೇವಿಯವರದು ಸಾಮಾಜಿಕ-ಚಾರಿತ್ರಿಕ ಅಂಶಗಳ ಚಿತ್ರಣದಲ್ಲಿ ಎತ್ತಿದ ಹೆಸರು. ಆಕೆಯ ತೀರ ಇತ್ತೀಚಿನ ೩ ಭಾಗಗಳ ಕಾದಂಬರಿಗಳ ಸರಣಿಯಲ್ಲಿ, ೩ ತಲೆಮಾರುಗಳ ಜೀವನದ ಘಟನಾವಳಿಯನ್ನಾಧರಿಸಿದ ಕೃತಿಯಲ್ಲಿ — ಬರುವ ಮೂರು ಮುಖ್ಯ ಸ್ತ್ರೀ ಪಾತ್ರಗಳು ತಾಯಿ, ಮಗಳು, ಮೊಮ್ಮಗಳು. ದಶಕಗಳ ಹಿಂದೆ ಬದಲಾವಣೆಯ ಹೊಸ ಮೌಲ್ಯಗಳನ್ನೊಳಗೊಂಡಿದ್ದ ಈ ಕೃತಿಯಲ್ಲಿ ವಿದ್ಯಾವಂತ, ಮಧ್ಯಮ ವರ್ಗದ ಬಂಗಾಳಿ ಮಹಿಳೆ ತನ್ನ ಸುತ್ತ ಪಿತೃಪ್ರಧಾನ ಸಮಾಜ ವಿಧಿಸಿದ ಸಾಮಾಜಿಕ ಸಂಕೋಲೆಗಳನ್ನು ಕಿತ್ತೊಗೆಯಲು ಎಷ್ಟು ಹೋರಾಡಬೇಕಾಗಿತ್ತೆಂದು ವಿವರಿಸಿದೆ.

ಈ ಸರಣಿಯ ಮೊದಲ ಕಾದಂಬರಿ "ಪ್ರಥಮ ಪ್ರತಿಶ್ರುತಿ" ಯ (೧೯೬೪) ಸತ್ಯವತಿ ಪ್ರಗತಿಪರ ವಿಚಾರಧಾರೆಯ ತಂದೆಯ ಒಬ್ಬಳೇ ಮಗಳು. ಆಕೆ ಬುದ್ಧಿವಂತೆಯಾಗಿ ಬೆಳೆದು, ಆತ್ಮವಿಶ್ವಾಸದ ತರುಣಿಯಾಗಿ, ಸ್ವಂತಿಕೆಯ ವಿವೇಚನೆಯಲ್ಲಿ ತನ್ನ ಸಂಪ್ರದಾಯವಾದಿ ಹಾಗೂ ಸಂಕುಚಿತ ಮನೋಭಾವದ ಅತ್ತೆಯ ನಂಬಿಕೆಗಳನ್ನು ವಿರೋಧಿಸುತ್ತಾಳೆ. ಆಕೆ ದುರ್ಬಲ ಮನದ, ಸಾಧು ಸ್ವಭಾವದ ತನ್ನ ಗಂಡನ ಮನವೊಲಿಸಿ ಕಲ್ಕತ್ತೆಗೆ ಕರೆದುಕೊಂಡು ಬರುತ್ತಾಳೆ. ಗಂಡು ಮಕ್ಕಳಿಗೆ ಒಳ್ಳೆಯ ಶಿಕ್ಷಣ ಕೊಡಿಸುತ್ತಾಳೆ. ಅಲ್ಲಿ ಮೂರನೆಯ ಮಗು ಸುವರ್ಣಲತಾ ಜನಿಸುವಳು. ಅವಳೂ ಬುದ್ಧಿವಂತೆ. ತಾಯಿಯ ಒತ್ತಾಸೆಯಿಂದಾಗಿ ಆಕೆಗೂ ಉತ್ತಮ ಶಿಕ್ಷಣ ದೊರೆಯುತ್ತದೆ. ಮಗಳಿಗೆ ಸರಿಯಾದ ವಯಸ್ಸು ಬರುವವರೆಗೂ ಮದುವೆ ಮಾಡಲಿಷ್ಟವಿಲ್ಲ ತಾಯಿಗೆ. ಆದರೆ ತಂದೆಗೆ ಸಮಾಜದ ಟೀಕೆಗೆ ಗುರಿಯಾಗಬೇಕಾಗುವುದಲ್ಲ ಎಂಬ ಭಯ, ಆತಂಕ. ಹಳ್ಳಿಯಲ್ಲಿನ ತನ್ನ ತಾಯಿಯ ಬೆಂಬಲದೊಂದಿಗೆ ಸುವರ್ಣಲತಾಳ ವಿವಾಹವನ್ನು ಮುಗಿಸಿಯೇ ಬಿಡುತ್ತಾನೆ. ಎರಡನೇ ಕಾದಂಬರಿ "ಸುವರ್ಣಲತಾ" ದಲ್ಲಿ ಮಗಳು ಗಂಡನ ಸರ್ವಾಧಿಕಾರಕ್ಕೆ ಒಳಪಟ್ಟು ಅನುಭವಿಸುವ ಯಾತನಾಮಯ ಬದುಕನ್ನು ಬಿಚ್ಚಿಡಲಾಗಿದೆ. ಅವಳ ಪತಿಯ ಮನೆಯ ಕ್ರೂರ ಸಂಪ್ರದಾಯದ ಪರಿಸರದಲ್ಲಿ ಆಕೆಯ ವಿದ್ಯೆ, ಬರವಣಿಗೆಯ ಪ್ರತಿಭೆ, ಬುದ್ಧಿಮತ್ತೆಗಳು ಕಳೆದು ಹೋಗಿದ್ದವು. ಅಲ್ಲಿ ಅವಳನ್ನು ಅರ್ಥ ಮಾಡಿಕೊಂಡ ವ್ಯಕ್ತಿ ಎಂದರೆ ಬಾಕುಲ್-ಸುವರ್ಣಲತಾಳ ಮಗಳು, ಆಕೆಗೂ ತಾಯಿಯ ಬರವಣಿಗೆ ಅನುವಂಶೀಯವಾಗಿ ಹರಿದು ಬಂದಿತ್ತು. ಈ ಸರಣಿಯ ಕಟ್ಟ ಕಡೆಯ ಕಥೆ "ದಿ ಸ್ಟೋರಿ ಆಫ್ ಬಾಕುಲ್" (೧೯೭೩) ಶೀಘ್ರಗತಿಯಲ್ಲಿ ಬೆಳೆಯುತ್ತಿದ್ದ ಕಲ್ಕತ್ತೆ, ಹಾಗೂ ಬದಲಾದ ಪರಿಸರಗಳು ಆಕೆ ತಂದೆಯ ನಿರಂಕುಶತ್ವವನ್ನು ಎದುರಿಸಲು ಸಾಕಷ್ಟು ಸಹಕಾರಿಯಾಗಿದ್ದವು, ಸಾಂಪ್ರದಾಯಿಕ ಮದುವೆಯನ್ನು ತಿರಸ್ಕರಿಸಿದ್ದಷ್ಟೇ ಅಲ್ಲದೆ, ತನ್ನ ಸಾಹಿತ್ಯ ಶಕ್ತಿಯನ್ನು ಉತ್ತಮಪಡಿಸಿಕೊಂಡಿದ್ದಳು. ಆಕೆಗೆ ಯಾರೂ ಸರಿಯಾದ ಜೊತೆಗಾರ ಸಿಗದೆ ಹೋದರೂ ಯಾರ ಹಂಗಿಲ್ಲದೆ, ಸ್ವತಂತ್ರವಾದ ಶಿಸ್ತಿನ ಜೀವನ ನಡೆಸುತ್ತಾಳೆ. ಸರಳ ವ್ಯಕ್ತಿತ್ವದ, ಕವಿ ಹೃದಯದ ತಾಯಿ ಕನಸು ಕಂಡಿದ್ದ ಹಾಗೂ ಧೃಢತೆ, ಸ್ಥೈರ್ಯ, ಆತ್ಮ ವಿಶ್ವಾಸದ ಪ್ರತೀಕವೆಂಬಂತಿದ್ದ ಅಜ್ಜಿ ಹೋರಾಟ ನಡೆಸಿದ್ದಂತಹ ಮೌಲ್ಯಗಳು ಆಕೆಗೆ ದಕ್ಕುತ್ತವೆ. ಆಧುನಿಕ ಮಹಿಳೆ ಎದುರಿಸಬೇಕಾದ ಸಂಘರ್ಷಣೆಗಳ ನೋವಿನ ಅರಿವೂ ಆಕೆಗಿದೆ. ಆಶಾಪೂರ್ಣಾದೇವಿ ಈ ಕಾದಂಬರಿಯಲ್ಲಿ, ಹಳೆಯ ಮತ್ತು ಹೊಸ ಮೌಲ್ಯಗಳ ನಡುವಿನ ಘರ್ಷಣೆಗಳನ್ನು ಬಿಚ್ಚಿಡುವುದರೊಂದಿಗೆ, ಈ ತಿಕ್ಕಾಟದಲ್ಲಿ ದುರ್ಬಲ ಮನದ ಸ್ತ್ರೀಯರು ಯಾವುದನ್ನು ಸ್ವೀಕರಿಸುವುದು, ಬಿಡುವುದು ಎಂಬ ತೊಳಲಾಟದಲ್ಲೇ ಕರಗಿಹೋಗುವ ಅಪಾಯದ ಸಾಧ್ಯತೆಯನ್ನು ಹೇಳಲು ಯತ್ನಿಸಿದ್ದಾರೆಂದು ಕಂಡು ಬರುತ್ತದೆ. ೭೦ ರ ಆಶಾಪೂರ್ಣದೇವಿ ಬಂಗಾಳಿ ಸಾಹಿತಿಗಳಲ್ಲಿ ಪ್ರಥಮ ಪಂಕ್ತಿಗೆ ಬರುವಂಥವರಾಗಿದ್ದಾರೆ.

ಆಶಾಪೂರ್ಣಾದೇವಿ ತಮ್ಮ ಕಾದಂಬರಿಯಲ್ಲಿ ಚಿತ್ರಿಸಿದಂತೆ ಘರ್ಷಣೆಗಳು ಬದಲಾದ ಸಂಸ್ಕೃತಿ, ಮೌಲ್ಯಗಳಿಂದ ಉದ್ಭವಿಸಿದಂಥವುಗಳಾಗಿವೆ. ಇಂದಿನ ಮಹಿಳೆಯರು ತಾವುಣ್ಣುತ್ತಿರುವ ನೋವಿನಿಂದಾಗಿ ಯಾವುದರೊಡನೆಯೂ ಹೊಂದಿಕೊಂಡು ಹೋಗಲಾಗದಂಥ ಪ್ರಬಲ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ವಿವಾಹ ವಿಚ್ಛೇದನವೂ ಈ ಸಮಸ್ಯೆಗಳಲ್ಲಿ ಒಂದು ತೀರ ಇತ್ತೀಚೆಗೆ ವಿಚ್ಛೇದನಗಳು ತಲೆಯೆತ್ತಿದ್ದರೂ, ಭಾರತೀಯ ಸಮಾಜದ ಕೆಲವು ವಿಭಾಗಗಳಲ್ಲಿ ಅಸ್ಥಿರತೆಯನ್ನುಂಟುಮಾಡಿದೆ ಎನ್ನಬಹುದು. ಗಂಡ-ಹೆಂಡಿರ ನಡುವಿನ ಮೌಲ್ಯಗಳ ತಿಕ್ಕಾಟಗಳು ದ್ವಂದ್ವ ಮನೋಭಾವದ ಗಂಡನ ನಡತೆಗಳೊಂದಿಗೆ ಮಿಳಿತವಾಗಿ ದಾಂಪತ್ಯದ ಬಿರುಕಿಗೆ ದಾರಿಮಾಡಿಕೊಟ್ಟಿದೆ. ಬಹುತೇಕ ಪುರುಷರು ಮೇಲ್ನೋಟಕ್ಕೆ ತಮ್ಮ ಪತ್ನಿಯರು, ವಿದ್ಯಾವಂತೆ, ಬುದ್ಧಿವಂತೆಯರಾಗಿದ್ದು, ಆಧುನಿಕವಾಗಿರಬೇಕೆಂದು ಬಯಸುತ್ತಾರೆ. ಆದರೆ ಅವರು ತಮ್ಮ ಅಂತರಂಗದಲ್ಲಿ ತಮ್ಮ ಪತ್ನಿಯರು ಸಾಧ್ವೀಶಿರೋಮಣಿಯಾಗಿ ತಮಗೆ ನಿಷ್ಠೆ, ವಿಧೇಯತೆಯನ್ನು ತೋರಬೇಕೆಂದು ಇಚ್ಛಿಸುತ್ತಾರೆ. ೧೯೬೯ ರಲ್ಲಿ ನಯನತಾರ ಸೆಹಗಲ್‌ರು ಬರೆದ "ಸ್ಟಾರ್ಮ್ ಇನ್ ಚಂಡೀಘರ್" ಕಾದಂಬರಿ ಇಂಥದೇ ಕಥಾವಸ್ತುವನ್ನೊಳಗೊಂಡಿದೆ. ವಿವಾಹ ಪೂರ್ವ ಹಾಗೂ ವಿವಾಹಾನಂತರ ಸ್ತ್ರೀ ಪುರುಷರು ನಿರ್ಬಂಧವಿಲ್ಲದೆ ಬೆರೆಯುವಂಥ ಮುಕ್ತ ಸಂಬಂಧವನ್ನು ವಿವರಿಸುತ್ತದೆ ಈ ಕಾದಂಬರಿ.

ದ. ಏಷ್ಯಾದ ಪ್ರಜೆಗಳು ವಿದೇಶಗಳಲ್ಲಿ ನೆಲೆಸುವುದು ಹೆಚ್ಚಿದಂತೆಯೇ ಹೋದಂಣೆಯಲ್ಲಿಯೂ ಹೊಸ ಹೊಸ ಸಮಸ್ಯೆಗಳು ಗೋಚರಿಸತೊಡಗಿದವು. ನಯನತಾರಾ ಸೆಹಗಲ್ ತಮ್ಮ "ದಿಸ್ ಟೈಂ ಆಫ್ ಮಾರ್ನಿಂಗ್" (೧೯೬೫) ರಲ್ಲಿ ಅಮೇರಿಕೆಯಲ್ಲಿ ವಾಸಿಸುವ ಲೀಲಾ ಮತ್ತು ನೀತಾ ಎಂಬಿಬ್ಬರು ಹುಡುಗಿಯರ ಬದುಕನ್ನು ನಮ್ಮ ಮುಂದಿಡುತ್ತಾರೆ. ಲೀಲಾ ಎಂಬ ತರುಣಿಗಿದ್ದ "ಮನೆ"ಯ ಬಗೆಗಿನ ತೀವ್ರ ಮೋಹ ಆಕೆ ಗರ್ಭಿಣಿಯಾಗಲು ಕಾರಣವಾಗಿ, ತನ್ನ ಹೊಸ ಜೀವನದ ರೀತಿ, ತಾನು ಬೆಳೆದು ಬಂದ ಸಂಪ್ರದಾಯಗಳ ನಡುವಿನ ಅಗಾಧ ವ್ಯತ್ಯಾಸವನ್ನು ಅರಗಿಸಿಕೊಳ್ಳಲಾಗದೇ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ ಹೆತ್ತವರೊಂದಿಗೇ ಇದ್ದರೂ ನೀತಾಳೂ ಸಹ ತನ್ನ ಅಕ್ಕನಂತೆಯೇ ಒಂಟಿತನ, ಪರಕೀಯ ಭಾವನೆಗಳನ್ನು ತೀವ್ರವಾಗಿ ಅನುಭವಿಸುತ್ತಾಳೆ.

ನಗರೀಕರಣ ಹಾಗೂ ಕೈಗಾರೀಕರಣಗಳಿಂದಾಗಿ ಎದುರಾದ ಸಮಸ್ಯೆಗಳೆಂದರೆ ಉದ್ಯೋಗಸ್ಥ ಪತ್ನಿಯರದು. ಸಮಾಜತಜ್ಞೆ ಪ್ರಮೀಳಾಕಪೂರ್ "ಮ್ಯಾರೇಜ್ ಅಂಡ್ ದಿ ವರ್ಕಿಂಗ್ ವುಮನ್ ಇನ್ ಇಂಡಿಯಾ" (ಡೆಲ್ಲಿ ೧೯೭೦) ಮತ್ತು "ಲವ್, ಮ್ಯಾರೇಜ್ ಅಂಡ್ ಸೆಕ್ಸ್" (ಡೆಲ್ಲಿ ೧೯೭೩) ಗ್ರಂಥಗಳಲ್ಲಿ ಈ ಸಮಸ್ಯೆಗಳನ್ನು ಕುರಿತು ವಿಶ್ಲೇಷಿಸಿದ್ದಾರೆ. ಅದುವರೆವಿಗೂ ಉದ್ಯೋಗಸ್ಥ ಪತ್ನಿಯರ ಸಮಸ್ಯೆಗಳನ್ನು ಕುರಿತು ಬರೆಯುತ್ತಿದ್ದುದು ಪುರುಷ ಸಾಹಿತಿಗಳೇ ಆಗಿದ್ದರು. ಅನಿತಾ ದೇಸಾಯಿ ಇಂಥ ವಿಷಯದ ಮೇಲೆ ಬರೆಯಬಲ್ಲಂಥ ಯಶಸ್ವಿ ಲೇಖಕಿಯರಲ್ಲಿ ಒಬ್ಬರು. ಅವರ "ವಾಯ್ಸಸ್ ಇನ್ ದಿ ಸಿಟಿ" (೧೯೬೫) ಯಲ್ಲಿ ಉದ್ಯೋಗಸ್ಥ ಮಹಿಳೆ ಅಮಲ ಉದ್ಯೋಗವೇ ತನ್ನ ಜೀವಿತದ ಪರಮ ಪದವಿ ಎಂದು ನಿರ್ಧರಿಸಿದವಳು. ಗುಲಾಮಿ ಪದ್ಧತಿಯಂಥ ಕತ್ತೆದುಡಿತದ ಬವಣೆ ನೀಗಲಾರದೆ ಅಮಲಾಳ ಸೋದರಿ ಮಾನಿಷಾ ಪ್ರಾಣತ್ಯಾಗ ಮಾಡುತ್ತಾಳೆ. ತನ್ನದೇ ಆದ ವ್ಯಕ್ತಿತ್ವವನ್ನಾಗಲೀ ಜೀವನವನ್ನಾಗಲೀ ಹೊಂದಿರದ ಅವಳು ಎಂದೂ ತನ್ನ ಕುಟುಂಬದ ಸದಸ್ಯರಿಂದ ಒಂದೂ ಒಳ್ಳೆಯ ಮಾತನ್ನೂ ಕೇಳುವ ಭಾಗ್ಯ ಪಡೆದಿರಲಿಲ್ಲ. ಇಂಥವೇ ಜೀವನದಿಂದ ಬೇಸತ್ತಿದ್ದ ಅಮಲ ಒಂದು ಉದ್ಯೋಗ ದೊರಕಿಸಿಕೊಂಡು ಅದರಲ್ಲಿ ತನ್ನನ್ನು ಗುರುತಿಸಿಕೊಳ್ಳುತ್ತಾಳೆ. ಉಷಾ ಪ್ರಿಯಂವದರ ಸಣ್ಣ ಕಥೆ "ಪೇಪರ್ ಫ್ಲವರ್ಸ್"ನ ನಾಯಕಿ-ಬೃಂದಾ ವಿಭಿನ್ನ ರೀತಿಯಲ್ಲಿ ಕಂಡು ಬರುತ್ತಾಳೆ. ತನ್ನ ಕುಟುಂಬಕ್ಕೆ ನೆರವಾಗುವ ಉದ್ದೇಶದಿಂದ ಕೆಲಸಕ್ಕೆ ಸೇರುವ ಅವಳು ಮನೆಗೆ ನಿಷ್ಪ್ರಯೋಜಕನಾದ ನಿರುದ್ಯೋಗಿ ಸಹೋದರನನ್ನು ಜರೆಯುತ್ತಾಳೆ.

ಸ್ತ್ರೀವಾದ ಹಾಗೂ ಲೇಖಕಿಯರು:—

ಸ್ತ್ರೀವಾದ ದ. ಏಷ್ಯಾವನ್ನೂ ಮುಟ್ಟಿತ್ತು. ಆಧುನಿಕ ಲೇಖಕಿಯರ ಕೃತಿಗಳಿಂದ ಇದನ್ನು ಅರಿಯಬಹುದು. "ದಿ ಫ್ರೆಂಡ್ ಆಫ್ ದಿ ಗ್ರೇಟ್ ಸಿಟಿ" (೧೯೭೯) ಮುನ್ನುಡಿಯಲ್ಲಿ ರಜನಿ ಪನಿಕ್ಕರ್ ಹೇಳುತ್ತಾರೆ:- ಪ್ರೇಮ, ವಿವಾಹ, ವಿಚ್ಛೇದಗಳು........ಇವೆಲ್ಲ ದಾಂಪತ್ಯ ಜೀವನದ ವಿವಿಧ ಮಜಲುಗಳು ಎನಿಸಿವೆ ಭಾರತೀಯ ಕುಟುಂಬಗಳಲ್ಲಿ. ಎಲ್ಲಿ ಶಾಸ್ತ್ರಾಡಂಬರಗಳ ಸಂಕೋಲೆಗಳಿವೆಯೋ ಅಲ್ಲಿ ಉಸಿರು ಗಟ್ಟಿಸುವ ವಾತಾವರಣವಿದ್ದರೆ, ಸ್ವಾತಂತ್ರ್ಯವಿದ್ದೆಡೆ (ಸ್ತ್ರೀಯರಿಗೆ) ವಿಚ್ಛೇದನಗಳಿರುತ್ತದೆ. ಇದು ಪ್ರತಿಯೊಬ್ಬರಿಗೂ ತಿಳಿದಿರುವಂಥದೇ ಆದರೂ ಇದಕ್ಕೆ ಪರಿಹಾರ ಕಂಡು ಹಿಡಿಯಲು ಯಾರಿಗೂ ಸಾಧ್ಯವಾಗಿಲ್ಲ ಎಂದಿದ್ದಾರೆ.

ರಜನಿ ಪಕ್ಕರ್‌ರವರ ಈ ಹೇಳಿಕೆಯನ್ನು ಶಾಂತಿ ಜೋಶಿಯವರ (೧೯೭೭) "ಫಿಷ್ ಅಂಡ್ ಡೆಟ್‌ನೆಟ್" ಕಾದಂಬರಿಯು ಅನುಮೋದಿಸುತ್ತದೆ. ಮಂಧಿರಾ ಈಜುಕೊಳದಲ್ಲಿ ಭೇಟಿಯಾದ ಹುಡುಗನ ಪ್ರೇಮಪಾಶದಲ್ಲಿ ಸಿಲುಕುತ್ತಾಳೆ. ಸ್ವಲ್ಪ ಕಾಲದ ಪ್ರಣಯದ ನಂತರ ಇಬ್ಬರೂ ಮದುವೆಯಾಗುತ್ತಾರೆ. ಆದರೆ ತನ್ನ ಪತ್ನಿಯನ್ನು ಸ್ವಿಮಿಂಗ್‌ಪೂಲ್‌ಗೆ ಹೋಗುವುದಕ್ಕಾಗಲಿ, ತನ್ನ ಸ್ನೇಹಿತರನ್ನು, ಬಂಧು ಬಳಗದವರನ್ನು ಕಾಣುವುದಕ್ಕೆ ಹೋಗಲಾಗಲಿ ಬಿಡುವುದಿಲ್ಲ ಗಂಡ. ಅವನಿಗೆ ಹೆಂಡತಿಯ ಬಗ್ಗೆ ಮತ್ಸರ ಹಾಗೂ ತನಗೆಲ್ಲಿ ದ್ರೋಹ ಬಗೆಯುವಳೋ ಎಂಬ ಸಂಶಯ. ತನ್ನ ಪತ್ನಿ ಚಂಚಲೆ ಏನೂ ಇಲ್ಲದಿದ್ದರೆ ತನ್ನನ್ನು ಅಷ್ಟು ಸುಲಭವಾಗಿ ವರಿಸುತ್ತಿದ್ದಳೆ ಎಂಬ ಭಾವನೆ, ಆಕೆಯ ವ್ಯಕ್ತಿತ್ವದ ಬಗ್ಗೆ ಅನುಮಾನ ಜೊತೆಗೆ ಅವಳ ಮೇಲೆ ಸಾಧ್ಯವಾದಷ್ಟೂ ಅಧಿಕಾರ ಚಲಾಯಿಸುವ ಹಂಬಲ, ತನ್ನ ಮಕ್ಕಳನ್ನು ಕಡೆಗಣಿಸಿಯಾದರೂ ತನ್ನ ಬಗ್ಗೆ ಹೆಚ್ಚು ಆಸಕ್ತಿ ವಹಿಸಬೇಕು

ತನ್ನಾ ಹೆಂಡತಿ ಎಂಬ ಧೋರಣೆಯವ, ಕಥೆಯ ಕೊನೆಯಲ್ಲಿ ಮಂದಿರ ತನ್ನ ಮೂರು ಮಕ್ಕಳನ್ನು ಕಳೆದುಕೊಂಡು ಗಂಡನಿಂದ ವಿಚ್ಛೇದನ ಕೇಳುತ್ತಾಳೆ. ಇಲ್ಲಿ ಕಾದಂಬರಿಕಾರ್ತಿ ಆಧುನಿಕತೆಯ ಪ್ರಭಾವಕ್ಕೆ ಒಳಗಾದ ಪುರುಷರ ದ್ವಂದ್ವಮನೋಭಾವಕ್ಕೆ ಹೆಚ್ಚು ಒತ್ತುಕೊಟ್ಟಿದ್ದಾರೆ. ಅವರೆಷ್ಟೇ ಮುಂದುವರೆದಿದ್ದರೂ ಸ್ತ್ರೀಯರು ಪುರಾಣದ ಸಾಧ್ವಿಮಣಿಗಳಂತೆ, ಸೀತೆಯ ಮಾದರಿಯ ವ್ಯಕ್ತಿತ್ವವನ್ನು ಸ್ತ್ರೀಯರಲ್ಲಿ ಕಾಣುತ್ತಾರೆ. ಇದಕ್ಕೆ ಚಲನಚಿತ್ರಗಳ ಪ್ರಭಾವವೂ ಇಲ್ಲದಿಲ್ಲ. ಪುರುಷರು ಮುಕ್ತಮನೋಭಾವದ, ಆಧುನಿಕತೆಯ, ಸೂಕ್ಷ್ಮಮನದ ಸ್ತ್ರೀಯರ ಬಗ್ಗೆ ಎಷ್ಟೇ ಆಕರ್ಷಿತರಾಗಿದ್ದರೂ, ಅವರನ್ನು ಅರ್ಥಮಾಡಿಕೊಳ್ಳಲಾಗದೆ, ಭರವಸೆಯಿಡಲು ಹಿಂಜರಿಯುವುದರಿಂದ ಸ್ತ್ರೀಯರೊಂದಿಗೆ ಶಾಶ್ವತ ಸಂಬಂಧ ಬೆಳೆಸಿಕೊಳ್ಳಲು ಅಶಕ್ತರಾಗುತ್ತಾರೆ. ಆದರೆ ಭಾರತದ ಪರಂಪರೆಯಲ್ಲಿಯೇ ವಿಶ್ವದ, ಸೃಷ್ಟಿಯ ಚೈತನ್ಯದ ಸೆಲೆ-ಸ್ತ್ರೀಶಕ್ತಿ ಎಂದು ಪರಿಗಣಿಸಲ್ಪಟ್ಟಿರುವುದರಿಂದ ಸ್ತ್ರೀತ್ವ ಸ್ವಲ್ಪ ಮಟ್ಟಿಗೆ ಶ್ರೇಷ್ಠತೆ ಇದೆಯೆಂದು ತಿಳಿದರೂ, ಆಕೆಯಿಂದ ವಿನಯ, ವಿಧೇಯತೆ ಬಯಸುವುದು ನಿಸರ್ಗ ನಿಯಮವಾಗಿಬಿಟ್ಟಿದೆ, ಮತ್ತು ಸ್ವಾಮಿತ್ವವೆಂದೂ ಗಂಡಸರ ಕೈಯಲ್ಲೇ ಇರಬೇಕೆಂದು ನಿರ್ಧರಿಸಲ್ಪಟ್ಟಿದೆ. ಆದರೆ ಭಾರತೀಯ ಪುರುಷರು ತಮ್ಮ ಪತ್ನಿಯರು ಆಶಾಭಂಗಕ್ಕೊಳಗಾಗಿ, ಅಸ್ತವ್ಯಸ್ತ ಮನೋಭಾವದಿಂದಾಗಿ ದಂಗೆಯೇಳುವಂಥ ಅವಕಾಶವನ್ನು ಸೃಷ್ಟಿಸ ಬಯಸುವುದಿಲ್ಲ.

ಪ್ರಮೀಳಾ– "ಸಂ ಇನ್ನರ್ ಫರಿ" (೧೯೫೫) ಕಮಲಾ ಮಾರ್ಕಂಡೇಯರ, ಕಾದಂಬರಿಯಲ್ಲಿ ಬರುವ ನಾಯಕಿಗೆ ಆಧುನಿಕತೆಯ, ಸ್ವತಂತ್ರ ಮನೋಭಾವದ ರೀತಿ ನೀತಿಗಳ ಮೋಹವಿಲ್ಲದಿದ್ದರೂ ತನ್ನ ಪತಿಯನ್ನು ಮೆಚ್ಚಿಸಲು ಆಧುನಿಕ, ಫ್ಯಾಷನ್‌ನ ಉಡುಪುಗಳನ್ನು

---

## ಯಾರೀ ಉಜ್ವಲಾ?

1934 ಸುಮಾರಿಗೆ ಬಂಗಾಳದಲ್ಲಿ ಕ್ರಾಂತಿಕಾರಿ ಚಟುವಟಿಕೆಗಳು ಇಳಿಮುಖವಾಗಿದ್ದವು. ಮುಖಂಡರಲ್ಲಿ ಬಹುಮಂದಿ ಸೆರೆಮನೆಯಲ್ಲಿದ್ದರು ಅಥವಾ ಮೃತರಾಗಿದ್ದರು. ಇಂಥ ಹೊತ್ತಿನಲ್ಲಿ ಮೂರು ಜನ ಹುಡುಗರು ಹಾಗೂ ಒಬ್ಬಳು ಹುಡುಗಿ ಒಬ್ಬ ಗವರ್ನರನ ಹತ್ಯೆ ನಡೆಸಲು ಯತ್ನಿಸಿದರು.

ಆ ಹುಡುಗಿ–ಉಜ್ವಲಾ–ಡಾಕ್ಕಾದಲ್ಲಿ 1914 ರಲ್ಲಿ ಜನಿಸಿದಳು. ತಂದೆ ಜಮೀನುದಾರನಾಗಿದ್ದು ಕ್ರಾಂತಿಕಾರಿಯಾದವನು. ವಿದ್ಯಾರ್ಥಿನಿಯಾಗಿದ್ದ 14 ವರ್ಷದ ಉಜ್ವಲಾ ತಂದೆಯ ಸೂಚನೆಯಂತೆ ಶಸ್ತ್ರಾಸ್ತ್ರಗಳನ್ನು ಹೊತ್ತು ಊರಿಂದೂರಿಗೆ ತಿರುಗುತ್ತಿದ್ದಳು.

ಡಾರ್ಜಿಲಿಂಗ್‌ನಲ್ಲಿ ಕುದುರೆ ಜೂಜಿನ ದಿವಸ ಗವರ್ನರನ ಕೊಲೆ ಮಾಡಬೇಕೆಂದು ನಿರ್ಧರಿಸಲಾಯಿತು. ಭವಾನಿ ಭಟ್ಟಾಚಾರ್ಯ ಮತ್ತು ರವಿ ಬ್ಯಾನರ್ಜಿ ಅವರು ಪಾಶ್ಚಾತ್ಯ ಉಡುಪು ತೊಟ್ಟು ಬಟ್ಟೆಯೊಳಗೆ ಶಸ್ತ್ರಗಳನ್ನು ಅಡಗಿಸಿಟ್ಟುಕೊಂಡು ಹೊರಟರು. ಉಜ್ವಲಾ ಹಾಗೂ ಮನೋರಂಜನ್ ಬ್ಯಾನರ್ಜಿ ಅವರನ್ನು ಹಿಂಬಾಲಿಸಿದರು, ಕಲ್ಕತ್ತೆಗೆ ರೈಲು ಹತ್ತಿದರು. ರೈಲು ಸಿಲುಗುರಿಗೆ ಬಂದಾಗ ಪೋಲೀಸರು ಬಣ್ಣದ ಸೀರೆ ಉಟ್ಟು, ದಪ್ಪ ಕನ್ನಡಕ ಹಾಕಿದ್ದ ಹುಡುಗಿಯನ್ನು ಅದರಲ್ಲಿ ಹುಡುಕತೊಡಗಿದರು. ಆದರೆ ಆ ಹೊತ್ತಿಗೆ ಉಜ್ವಲಾ ಸೀರೆ ಬದಲಾಯಿಸಿದ್ದಲ್ಲದೆ ಕನ್ನಡಕ ತೆಗೆದುಬಿಟ್ಟಿದ್ದಳು. ಪೋಲಿಸರಿಗೆ ಆಕೆಯ ಗುರುತು ಸಿಗಲಿಲ್ಲ. ಕಲ್ಕತ್ತಾ ಸೇರಿದ್ದಾಯಿತು, ಆದರೆ ಶೋಭಾರಾಣಿ ದತ್ತರ ಮನೆಯಲ್ಲಿ ಈಕೆಯ ಮತ್ತು ಇನ್ನಿಬ್ಬರ ಬಂಧನವಾಯಿತು. ವಿಚಾರಣೆ ನಡೆದು ಭವಾನಿ ಹಾಗೂ ರವಿಗೆ ಮರಣದಂಡನೆ ವಿಧಿಸಲ್ಪಟ್ಟಿತು. ಉಜ್ವಲಾಗೆ ಅಜೀವ ಕಾರಾಗೃಹವಾಸ ಶಿಕ್ಷೆಯಾಯಿತು. 1939 ರಲ್ಲಿ ಆಕೆಗೆ ಬಿಡುಗಡೆಯಾಯಿತು.

1942 ರಲ್ಲಿ ಪುನಃ ಈಕೆಯನ್ನು ಬಂಧಿಸಿದರು. ಮೂರು ವರ್ಷ ಹಾಗೂ ಹೆಚ್ಚು ಕಾಲ ಸೆರೆಮನೆಯಲ್ಲಿದ್ದ ಮೇಲೆ 1946 ರಲ್ಲಿ ಬಿಡುಗಡೆಯಾಯಿತು. ಅವರು ನೇತಾಜಿ ಸುಭಾಷ್ ಚಂದ್ರಬೋಸರ ರಾಜಕೀಯ ಪಕ್ಷ ಫಾರ್ವರ್ಡ್ ಬ್ಲಾಕ್‌ನಲ್ಲಿ ಕೆಲಸ ಮಾಡಿದರು. ನೌಖಾಲಿಯಲ್ಲಿ ಮತೀಯ ಗಲಭೆಯಿಂದ ನೊಂದಿದ್ದ ಜನತೆಯ ಸಹಾಯಕ್ಕೆ ಹೋಗಿದ್ದ ಉಜ್ವಲಾ ಸಮಾಜ ಸೇವೆಯಲ್ಲಿ ಆಸಕ್ತರಾದರು. ಅವರೊಂದು ಜನತಾ ಕಲ್ಯಾಣ ಸಂಸ್ಥೆಯನ್ನು ಪ್ರಾರಂಭಿಸಿದರು. ಕ್ರಾಂತಿಕಾರ ಭೂಪೇಂದ್ರ ಕಿಶೋರ ರಕ್ಷಿತರಾಯ್‌ರನ್ನು 1948 ರಲ್ಲಿ ಆಕೆ ವಿವಾಹವಾದರು. (ಸಂಗ್ರಹ—ಜ್ಞಾನ ಗಂಗೋತ್ರಿ ಸಂಪುಟ-7 ಭಾರತದ ಕಥೆ)

ಡಿ. ಮಧುನಗರ್ಲೆ

---

ಧರಿಸುತ್ತಾಳೆ, ಟೆನ್ನಿಸ್ ಆಡುತ್ತಾಳೆ, ಪಾರ್ಟಿಗಳನ್ನು ಏರ್ಪಡಿಸುತ್ತಾಳೆ. ಹಾಗಿದ್ದರೂ ಅವಳ ಗಂಡ ಕಿಟ್ ಅವಳನ್ನು ಸಮಾನತೆಯಿಂದ ನಡೆಸಿಕೊಳ್ಳುವುದಿರಲಿ, ಆಕೆಯ ಬಗ್ಗೆ ಕೀಳುಭಾವವನ್ನೇ ಹೊಂದಿರುತ್ತಾನೆ. ಪ್ರಮಿಲಾಗೆ ಮಕ್ಕಳಿರುವುದಿಲ್ಲವಾದ್ದರಿಂದ ಕಿತ್ತುತಿನ್ನುವ ಒಂಟಿತನದಿಂದ ಬಿಡಿಸಿಕೊಳ್ಳಲು ಸಾಮಾಜಿಕ ಕಾರ್ಯಗಳಲ್ಲಿ ಮುಳುಗಿರುತ್ತಾಳೆ. ಅದು ಅವಳ ಗಂಡನಿಗೆ ಸಹ್ಯವಾಗಿರುವುದಿಲ್ಲ. ಗಂಡನ ವಿರೋಧವಿದ್ದರೂ, ತೀರ ಕೆಳಜಾತಿಯ ಬಡಹುಡುಗಿಯನ್ನು ದತ್ತು ತೆಗೆದುಕೊಳ್ಳುತ್ತಾಳೆ. ಅಂತ್ಯದಲ್ಲಿ ಬೆಂಕಿಬಿದ್ದ-ಶಾಲೆಯೊಳಗೆ ಸಿಕ್ಕಿಹಾಕಿಕೊಂಡಿದ್ದ ಮಕ್ಕಳನ್ನು ರಕ್ಷಿಸುವ ಉದ್ದೇಶದಿಂದ ಜ್ವಾಲೆಯೊಳಗೆ ನುಗ್ಗಿದ ಪ್ರಮಿಲಾ ದಹಿಸಿ ಹೋಗುತ್ತಾಳೆ. ಈ ಕಾದಂಬರಿಗಳಲ್ಲಿ ಹೆಂಗಸರು ತಮ್ಮ ಗಂಡಂದಿರ ಇಬ್ಬಗೆ ನೀತಿಯನ್ನು ಬೂಟಾಟಿಕೆಯನ್ನು ಎದುರಿಸುತ್ತಾರೆಯೇ ವಿನಃ ಸಮಕಾಲೀನ ಸಾಹಿತಿಗಳಂತೆ ಆ ವ್ಯವಸ್ಥೆಯಲ್ಲಿಯೇ ಕೊಳೆತು ಹೋಗಲಿಚ್ಛಿಸರು. ನವ್ಯ ಕಾದಂಬರಿಗಳಲ್ಲಿ ವಿವಾಹ ಬಾಹಿರ ಸಂಬಂಧಗಳಿಗೆ ಕಾರಣವಾಗುವಂಥ ಲೈಂಗಿಕ ನಿಷೇಧಗಳ ಬಗ್ಗೆ ವಿರೋಧವನ್ನು ವ್ಯಕ್ತಪಡಿಸುತ್ತಲೇ ಬಂದಿದ್ದಾರೆ. ಇದನ್ನು ನಯನತಾರಾ ಸೆಹೆಗಲ್‌ರ "ಸ್ಟಾರ್ಮ್ ಇನ್ ಚಂಡೀಘರ್" ಕಾದಂಬರಿಯಲ್ಲಿ ಕಾಣಬಹುದು. ಕೃಷ್ಣಾ ಸವಾಟಿಯವರ "ದಿ ಸನ್ ಫ್ಲವರ್ ಆಫ್ ದಿ ಡಾರ್ಕ್‌ನೆಸ್" (೧೯೭೨) ರ ಪ್ರಮುಖ ಪಾತ್ರವಾದ ರತಿ ಲೈಂಗಿಕತೆಗೆ ಸಂಬಂಧಿಸಿದಂಥ ಮಾನಸಿಕ ಸಮಸ್ಯೆಗಳಿಂದ ತೀವ್ರವಾಗಿ ಬಳಲುತ್ತಿರುವ ರೀತಿಯಲ್ಲಿ ಚಿತ್ರಿಸಲ್ಪಟ್ಟಿದೆ. ರತಿ ಸಣ್ಣ ಬಾಲಕಿಯಾಗಿದ್ದಾಗ ವೃದ್ಧನೊಬ್ಬನಿಂದ ಈ ವಿಷಯದಲ್ಲಿ ಸಾಕಷ್ಟು ಪೀಡಿಸಲ್ಪಟ್ಟಿರುತ್ತಾಳಲ್ಲದೆ, ಅವಳ ಓರಗೆಯ ಹುಡುಗಿಯರು ಆ ಸಂದರ್ಭದಲ್ಲಿ ಅವಳನ್ನು ರಕ್ಷಿಸಲು ಯತ್ನಿಸದೆ ಅವಳನ್ನು ಮೂದಲಿಸುತ್ತಿರುತ್ತಾರೆ. ಈ ಘಟನೆ ಅವಳ ಮನದಲ್ಲಿ ಎಷ್ಟು ತೀವ್ರವಾದ ಗಾಯವನ್ನುಂಟುಮಾಡಿತ್ತೆಂದರೆ ಮುಂದೆ ಅವಳು ಸಿನಿಕಳಾಗುವುದರೊಂದಿಗೆ ಪುರುಷ ದ್ವೇಷಿಯಾಗಲೂ ಕಾರಣವಾಗಿ ಬಿಡುತ್ತದೆ. ಯುವಕರೊಂದಿಗೆ ಚೆಲ್ಲಾಟವಾಡಲು ಇಚ್ಛಿಸಿದಂತೆ ವರ್ತಿಸಿದರೂ, ಯಾರನ್ನೂ ಆತ್ಮೀಯರೆಂದು ಪರಿಗಣಿಸದೆ, ಅವರ ಭಾವನೆಗಳಿಗೆ ಯಾವ ಬೆಲೆಯೂ ಕೊಡದೆ ಹುಡುಗಾಟದಿಂದ ನಡೆದುಕೊಳ್ಳುವುದರಲ್ಲೇ ಅವಳು ಸಂತೋಷಿಸುತ್ತಾಳೆ. ವಿವಾಹವೆಂದರೆ ಆಕೆಗೆ ಪರಿಹಾಸ್ಯದ ವಸ್ತು ಮತ್ತು ವಿವಾಹದ ಸಂಬಂಧವೇ ಟೊಳ್ಳು ಎಂದು ವಿಮರ್ಶಿಸುತ್ತಿದ್ದಳು. ಈಗಾಗಲೇ ಗೃಹಸ್ಥನಾದ ವಿವಾಹಿತನೊಂದಿಗೆ ಪ್ರಣಯ ಸಂಬಂಧ ಬೆಳೆಸುತ್ತಾಳೆ. ಅವಳು ಅವನನ್ನು ನಿಜವಾಗಿಯೂ ಪ್ರೀತಿಸುತ್ತಿದ್ದು, ಅವನೊಡನೆ ಸಂಬಂಧ ಬೆಳೆಸಲು ಬಯಸುತ್ತಾಳೆ. ಆದರೆ ದಿವಾಕರ ತನ್ನ ಪತ್ನಿಯನ್ನು ತ್ಯಜಿಸಲು ನಿರ್ಧರಿಸಿದಾಗ ರತಿಯೇ ಬೇಡವೆಂದು ತಡೆಯುತ್ತಾಳೆ. ಅವಳಿಗೆ ಈ ವಿಚ್ಛೇದನ ದಿವಾಕರನ ಮಗುವಿನ ಮೇಲೆ ಉಂಟುಮಾಡುವ ಪರಿಣಾಮವನ್ನು ಊಹಿಸಲೂ ಸಾಧ್ಯವಿಲ್ಲ. ಅಷ್ಟೇ ಅಲ್ಲದೆ ತನ್ನ ವಿಚಿತ್ರ ಸ್ವಭಾವ ಮದುವೆಗೆ ಹೊಂದಿಕೆಯಾಗದೆಂದು ಅವಳ ನಂಬಿಕೆ. ದಿವಾಕರನೊಡನೆಯ ಮದುವೆಯನ್ನು ನಿರಾಕರಿಸಿದರೂ ಅವನೊಡನೆ ಲೈಂಗಿಕ ಸಂಬಂಧಕ್ಕೆ ಸಮ್ಮತಿಸುವಳಲ್ಲದೆ, ಅವನು ಯಾವುದೆ ಸಮಯದಲ್ಲೂ ಅವಳ ಬಳಿ ಬರಬಹುದಾದ ಸ್ವಾತಂತ್ರ್ಯವೂ ಅವನಿಗಿರುತ್ತದೆ. ಇವಳೂ ಅವನಿಗಾಗಿ ಕಾಯುತ್ತಿರುತ್ತಾಳೆ.

ರಜನಿ ಪನಿಕ್ಕರ್‌ರವರ "ದರಿಯಾ" ದ(೧೯೭೪) ಸ್ತ್ರೀ ಪಾತ್ರಗಳು ಲೈಂಗಿಕತೆಯ ವಿಷಯದಲ್ಲಿ ವಿಪರೀತ ಕಟ್ಟುನಿಟ್ಟನ್ನೇನೂ ಪ್ರತಿಪಾದಿಸುವುದಿಲ್ಲ. ನವಿತಾ ತನ್ನ ಪ್ರೇಮಿ ಹರಿಯೊಡನೆ ಜೀವಿಸುತ್ತಿರುತ್ತಾಳೆ. ಹರಿಗೆ ಈಗಾಗಲೆ ಒಬ್ಬ ಹೆಂಡತಿ. ಒಂದು ಮಗುವಿದ್ದು ವಿಚ್ಛೇದನಕ್ಕಾಗಿ ಕಾಯುತ್ತಿರುತ್ತಾನೆ. ಯಾವುದೋ ಒಂದು ಸಂದರ್ಭದಲ್ಲಿ ನವಿತಾ ಹರಿಯೊಡನೆ ಮನಸ್ತಾಪ ಮಾಡಿಕೊಂಡು ಅವನನ್ನು ಬಿಟ್ಟು ಸುಶೀಲ ಎಂಬ(ಫೆಮಿನಿಸ್ಟ್) ಸ್ತ್ರೀವಾದದಲ್ಲಿ ನಂಬಿಕೆಯಿರುವ ಮಹಿಳೆ ನಡೆಸುತ್ತಿದ್ದ ಹಾಸ್ಟೆಲ್‌ಗೆ ಬಂದು ಸೇರುತ್ತಾಳೆ. ಅಲ್ಲಿ ಯುವಕನೊಬ್ಬನ ಪರಿಚಯವಾಗಿ, ಪರಿಚಯ ಪ್ರೇಮಕ್ಕೆ ತಿರುಗುತ್ತದೆ. ಇಷ್ಟರಲ್ಲಿ ಹರಿಗೆ ವಿಚ್ಛೇದನವೂ ಸಿಕ್ಕಿ ಮಗುವಿನ ರಕ್ಷಣೆಯ ಹೊಣೆಯೂ ಅವನಿಗೇ ಒರುತ್ತದೆ. ಆಗ ನವಿತಾ ಹರಿಯಲ್ಲಿಗೆ ಹಿಂತಿರುಗಿ ಆ ಮಗುವಿಗೆ ತಾಯಾಗುತ್ತಾಳೆ. ಅದೇ ಕಾದಂಬರಿಯಲ್ಲಿನ ಮತ್ತೊಂದು ಪಾತ್ರ "ಚಾರು", ಬಹಳ ದಾಷ್ಟ್ಯದ ಹೆಣ್ಣಾಗಿದ್ದು ಬಹಳ ಜನರೊಂದಿಗೆ ಸಂಬಂಧವನ್ನಿರಿಸಿಕೊಂಡವಳು. ಅಂತ್ಯದಲ್ಲಿ ಅವಳಿಗೊಬ್ಬ ಯುವಕ ದೊರೆತು ಅವಳೊಡನೆ ವಿವಾಹವಾಗಿ ಅವಳ ಹಿಂದಿನ ಕಥೆಯನ್ನೆಲ್ಲ ಮರೆತು ಬಿಡಲು

ನಿಶ್ಚಯಿಸುತ್ತಾನೆ. ಈ ಕಥೆ ಗಂಡನ ಅಥವಾ ತಂದೆಯ ಸಾಂಪ್ರದಾಯಿಕ ಸ್ವಾಮಿತ್ವವನ್ನು ಹೆಣ್ಣು ಹೇಗೆ ವಿರೋಧಿಸುತ್ತಾಳೆಂಬುದನ್ನು ಉತ್ಪ್ರೇಕ್ಷಿಸಿದೆ ಎನ್ನಬಹುದು.

ಮೆಹರುನ್ನೀಸಾ ಪರ್‌ವೀಜ್ ತಮ್ಮ "ಹರ್ ಹೌಸ್" (೧೯೭೨) ಕಾದಂಬರಿಯಲ್ಲಿ ಇಬ್ಬರು ಮಹಿಳೆಯರನ್ನು ಚಿತ್ರಿಸಿದ್ದಾರೆ. ಎಲ್ಮಾ ಒಳ್ಳೆಯ ವಿದ್ಯಾವಂತೆಯೂ, ಸಭ್ಯ ಹಾಗೂ ಸುಂದರ ತರುಣಿ. ದೀರ್ಘಕಾಲದ ಅಸ್ವಾಸ್ಥ್ಯತೆಯಿಂದಾಗಿ ಆಕೆಯನ್ನು ವಿಚ್ಛೇದನ ಕೊಟ್ಟು ದೂರಮಾಡಿದ ಅವಳ ಗಂಡ ಎಲ್ಮಾಳ ಸಹೋದರನೂ ಅವಳ ನೋವಿಗೆ ಸ್ಪಂದಿಸದೆ ದುಡಿಯುವ ಯಂತ್ರದಂತೆ ಕಾಣುವುದರಿಂದ ಕಡೆಯವರೆಗೂ ತನ್ನವರಿಲ್ಲವೆಂಬ ನೋವು ಅವಳೊಂದಿಗೆ ಉಳಿಯುತ್ತದೆ. ಮತ್ತೊಬ್ಬ ತರುಣಿ ರೇಷ್ಮಾ ಗರ್ಭಿಣಿಯಾಗಿದ್ದರೂ ಆಕೆಯ ತಾಯಿ ಕಟ್ಟಾ ಕ್ರಿಶ್ಚಿಯನ್ ಆದ್ದರಿಂದ ತನ್ನ ಮಗಳು ಹಿಂದೂ ತರುಣನೊಬ್ಬನನ್ನು ಮದುವೆಯಾಗಲು ಬಿಡಳು. ತನ್ನ ಮಗಳು ಅವಿವಾಹಿತ ತಾಯಿಯಾದರೂ ಸಹಿಸಿಯೇನು ಆದರೆ ತನ್ನ ಧರ್ಮದವನಲ್ಲದವನನ್ನು ಮದುವೆಯಾಗಲು ಬಿಡೆ ಎಂಬ ಥ ಧರ್ಮಾಂಧತೆ ಆಕೆಯದು.

ಮತ್ತೊಬ್ಬ ಯುವ ಲೇಖಕಿ ಮಮತಾ ಕಲಿಯಾ ತಮ್ಮ ಕೃತಿಗಳಲ್ಲಿ ಲೈಂಗಿಕ ಸ್ವಾತಂತ್ರ್ಯದಲ್ಲಿ ನಂಬಿಕೆಯಿರುವ ಆದರೆ ತಮ್ಮ ಪತ್ನಿಯರು ಪರಿಶುದ್ಧ ಶೀಲವುಳ್ಳವರಾಗಿರಬೇಕೆಂಬ ಮನೋಭಾವದ ತರುಣರನ್ನು ಗೇಲಿ ಮಾಡಿದ್ದಾರೆ. ಇವರ "ಬೇಘಾರ್"(೧೯೭೧) ಕಾದಂಬರಿಯಲ್ಲಿ ಪರಂಜಿತ್ ಮಧ್ಯಮವರ್ಗದ ಬುದ್ಧಿವಂತನಾದ, ಬಾಂಬೆಯ ತರುಣ. ಅವನು ಸಂಜೀವನಿ ಎಂಬ ತರುಣಿಯನ್ನು ಗಾಢವಾಗಿ ಪ್ರೀತಿಸುತ್ತಿರುತ್ತಾನೆ. ಅವಳೂ ಅವನಂತಹುದೇ ಮನೋಭಾವದವಳು. ಆಧುನಿಕ ನಾಗರೀಕ ಹಾಗೂ ಸಭ್ಯ ಹೆಣ್ಣು. ಅವಳೊಂದಿಗಿನ ಪ್ರಥಮ ಸಂಬಂಧದಿಂದಾಗಿ ಸಂಜೀವನಿ ಕನ್ಯೆಯಲ್ಲವೆಂದು ತಿಳಿದ ಪರಮಾಜಿತ್ ಕುಪಿತನಾಗಿ ಅವಳನ್ನು ತಿರಸ್ಕರಿಸುತ್ತಾನೆ. ಕಡೆಗೆ ತನ್ನ ತಾಯಿಯಿಂದೆಯುರು ಆರಿಸಿದ ಅವಿದ್ಯಾವಂತ, ಸಂಕುಚಿತ ಮನೋಭಾವದ ಹೆಣ್ಣನ್ನೇ ಪತ್ನಿಯನ್ನಾಗಿ ಸ್ವೀಕರಿಸುತ್ತಾನೆ. ಆದರೆ ಮದುವೆಯಾಗಿ ೫ ವರ್ಷಗಳಾದರೂ ಆತನಿಗೆ ಸಂಜೀವನಿಯನ್ನು ಮರೆಯಲೇ ಆಗದೆ ಭಗ್ನ ಮನೋರಥನಾಗಿ ಸಾವನ್ನಪ್ಪುತ್ತಾನೆ.

ಮಾಲತಿ ಪೆರುಲ್ಕರ್ ತಮ್ಮ ಕಿರು ಕಾದಂಬರಿ "ಇನ್ನಿ" (೧೯೭೩)ಯಲ್ಲಿ ಇನ್ನೊಂದು ಮುಖವನ್ನು ಚಿತ್ರಿಸಿದ್ದಾರೆ. ಇಲ್ಲಿ ಬರುವ ಇನ್ನಿ ಆಧನಿಕ ಮನೋಭಾವದ ನಿರ್ಭೀಡೆಯ ಹೆಣ್ಣಾದರೂ ಸಾಂಪ್ರದಾಯಿಕ ನೈತಿಕ ಮೌಲ್ಯಗಳಿಗೆ ಅಂಟಿಕೊಂಡವಳು. ಅವಳು ಪ್ರೀತಿಸಿದ ರಾಜ್ ಹಿಂದಿ ಚಿತ್ರಗಳ ಹಿನ್ನೆಲೆ ಗಾಯಕ. ಸಣ್ಣ ವಯಸ್ಸಿನಲ್ಲಿಯೇ ಮನೆಬಿಟ್ಟ ಅವನಿಗೆ ಬಲವಂತದಿಂದ ಮದುವೆಯಾಗಿದ್ದು, ಪತ್ನಿಯನ್ನು ದೂರಮಾಡಿರುತ್ತಾನೆ. ಅವನಿಗೆ ನಂತರ ಒಳ್ಳೆಯ ಗಾಯಕನೆಂಬ ಕೀರ್ತಿಯೊಂದಿಗೆ ಸಾಕಷ್ಟು ಗೆಳತಿಯರೂ ಇರುತ್ತಾರೆ. ಮತ್ತೊಮ್ಮೆ ಇನ್ನಿಯೊಡನೆ ಮುಖಾಮುಖಿಯಾದಾಗ ಅವನಿಗೆ ತಾನು ಇನ್ನಿಯನ್ನು ಪ್ರೀತಿಸುತ್ತಿರುವುದರ ಅರಿವಾಗಿ ಅವಳನ್ನು ಮದುವೆಯಾಗಲು ಮುಂದಾಗುತ್ತಾನೆ. ಆದರೆ ಇನ್ನಿ ರಾಜ್ ಶುದ್ಧನಡೆಯಿಲ್ಲದವನೆಂಬ ಕಾರಣಕ್ಕಾಗಿ ತಿರಸ್ಕರಿಸಿ, ಸಾಹಿಲ್ ಎಂಬ ತನ್ನ ಬಾಲ್ಯದ ಮುಸ್ಲಿಂ ಸ್ನೇಹಿತನನ್ನು ವಿವಾಹವಾಗುತ್ತಾಳೆ. ಸಾಹಿಲ್‌ನ ಸಾಚಿಕೆ ಹಾಗೂ ಮುಗ್ಧಸ್ವಭಾವಗಳಿಗೆ ಮಾರು ಹೋಗಿರುತ್ತಾಳೆ. ಆದರೆ ಆಕೆ ರಾಜ್‌ನನ್ನು ಮರೆಯಲು ಸಾಧ್ಯವಿಲ್ಲದಷ್ಟು ಅಸಹಾಯಕಳಾಗಿರುತ್ತಾಳೆ. ರಾಜ್‌ನ ದುರಂತ ಮರಣದ ಸಮಯದಲ್ಲಿ ಇನ್ನಿ ರಾಜ್‌ನನ್ನು ಗಾಢವಾಗಿ ಪ್ರೀತಿಸುತ್ತಿದ್ದುದನ್ನು ಅರಿತುಕೊಂಡ ಸಾಹಿಲ್‌ಗೆ ಅವಳನ್ನು ಈ ಮೊದಲಿನಂತೇ ಪ್ರೀತಿಸಲು ಅಸಾಧ್ಯವೆಂದೆನಿಸುತ್ತದೆ. ಇಬ್ಬರೂ ಬೇರಾಗುತ್ತಾರೆ, "ಸುಶೀಲತೆ" ಎಂಬ ವಾದಕ್ಕೆ ಅಂಟಿಕೊಂಡ ಇನ್ನಿ ಇಬ್ಬರ ಬಾಳನ್ನೂ ಹಾಳುಮಾಡುತ್ತಾಳೆ. ಇಲ್ಲಿ ಕಾದಂಬರಿಗಾರ್ತಿ ಮಧ್ಯಮ ವರ್ಗದವರು ಪಾಶ್ಚಾತ್ಯರ ಪ್ರಭಾವಕ್ಕೆ ಒಳಗಾಗಿಯೂ ಹಳೆಯ ಮೌಲ್ಯಗಳಿಗೇ ಅಂಟಿಕೊಂಡರೆ ಎದುರಿಸಬೇಕಾಗುವ ದುರಂತಗಳನ್ನು ಚಿತ್ರಿಸಿದ್ದಾರೆ.

ಮೃದುಲಾ ಗಾರ್ಗ್ ಈ ನಿಟ್ಟಿನಲ್ಲಿ ಇನ್ನೂ ಹೆಚ್ಚಿನ ಧೈರ್ಯ ಪ್ರದರ್ಶಿಸುತ್ತಾರೆ. "ಸನ್‌ಶೈನ್ ಆಫ್ ಹರ್ ಶೇರ್" (೧೯೭೫) ಕೃತಿಯಲ್ಲಿ ಲೈಂಗಿಕಾನಂದವೇ ಶ್ರೇಷ್ಠ, ಮತ್ತು ಶಾರೀರಿಕ ಸಂಬಂಧದ ಭಾವವೇಗದ ಉದ್ರೇಕಾವಸ್ಥೆಗೂ, ಪ್ರಣಯ ಭಾವನೆಗಳಿಗೂ

ಸಂಬಂಧವೇ ಇಲ್ಲ ಎಂದು ಹೇಳುತ್ತಾರೆ. ಪರಸ್ಪರ ದೈಹಿಕ ಆಕರ್ಷಣೆಗೊಳಗಾದ ಇಬ್ಬರಲ್ಲಿ ಯಾವುದೇ ಬಗೆಯ ಟೊಳ್ಳು ಆದರ್ಶವಾಗಲಿ ಪೌರಾಣಿಕ ಕಥೆಗಳಲ್ಲಿ ತಿಳಿಸಿದಂಥ ಭಾವಗಳಾಗಲಿ ತಲೆಹಾಕುವುದಿಲ್ಲ ಎಂದು ಅಭಿಪ್ರಾಯ ಪಡುತ್ತಾರೆ. ಮಾನಿಷಾ ಸಣ್ಣ ಕಥೆಗಳ ಕಥೆಗಾರ್ತಿ ಹಾಗೂ ಹಿಂದಿ ಉಪನ್ಯಾಸಕಿಯಾಗಿರುತ್ತಾಳೆ ಕಾಲೇಜೊಂದರಲ್ಲಿ. ಕೃತಿಯಲ್ಲಿ ಪ್ರಮುಖ ಪಾತ್ರವಾಗಿರುವ ಮಾನಿಷಾ ಸದಾ ಗಂಡು — ಹೆಣ್ಣಿನ ಸಂಬಂಧದಲ್ಲಿ ಶಾರೀರಕ ಸಂಬಂಧಕ್ಕೇ ಹೆಚ್ಚು ಒತ್ತು ಕೊಡುತ್ತಿದ್ದಳಲ್ಲದೆ, ಇದರಲ್ಲಿ ಪ್ರೇಮ–ಪ್ರೀತಿ, ಅಥವ ಶ್ರದ್ಧೆ–ನಿಷ್ಠೆಗಳಿಗೆ ತಾವಿಲ್ಲ ಎಂಬ ವಾದದವಳು. ಮದುವೆ ಲೈಂಗಿಕ ಸಂಬಂಧದಲ್ಲಿ ಪೂರ್ಣ ತೃಪ್ತಿ ತಂದುಕೊಡುವಲ್ಲಿ ಅಡಚಣೆಯೊಡ್ಡುತ್ತದೆ ಎಂಬುದು ಆಕೆಯ ಗಟ್ಟಿಯಾದ ನಂಬಿಕೆ. ಆಕೆ ಜತಿನ್‌ನೊಡನೆ ಮದುವೆಯಾಗಿದ್ದರೂ ಮಧುಕರನೊಡನೆ ಸಂಬಂಧವನ್ನಿರಿಸಿಕೊಂಡಿದ್ದಳು. ನಂತರ ಮಧುಕರನೊಡನೆ, ಮದುವೆಯಾದಾಗ ತನ್ನ ಮಾಜಿ ಗಂಡನೊಡನೆ ನ್ಯಾಯ ಬಾಹಿರ ಸಂಬಂಧವನ್ನಿರಿಸಿಕೊಂಡಿದ್ದವಳು.

ಆದರೆ ಎಲ್ಲ ಲೇಖಕಿಯರೂ ಈ ನಮೂನೆಯ ಸಂಕೀರ್ಣತೆಯ(ಲೈಂಗಿಕತೆಯಲ್ಲಿ) ತತ್ವದ ಪ್ರತಿಪಾದಕರಲ್ಲ. ಕೆಲವು ಮಂದಿ ಲೇಖಕಿಯರು ವೈವಾಹಿಕ ವೈಮನಸ್ಯದಿಂದುದ್ಭವಿಸುವ ದೋಷಗಳನ್ನು ನಂತರ ವಿಚ್ಛೇದನ, • ಮಕ್ಕಳಿಲ್ಲದಿರುವುದು ........ ಇತ್ಯಾದಿ ಸಮಸ್ಯೆಗಳನ್ನು ಕುರಿತು ವಿಶ್ಲೇಷಿಸಿದ್ದಾರೆ. ತನ್ನ ತಾಯಿಯ ವರ್ತನೆ, ನಡವಳಿಕೆಗಳು ಹಾದರ ಎಂಬ ತಿಳುವಳಿಕೆ ಮಗುವಿಗೆ ಒಂದರೆ ಅದು ತೀವ್ರ ಮಾನಸಿಕ ಕ್ಷೋಭೆಗೆ ದಾರಿಯಾಗುತ್ತದೆ. ಇದಕ್ಕಿಂತಲೂ ಮಕ್ಕಳ ಶ್ರದ್ಧೆ ನಿಷ್ಠೆಗಳ ಪರೀಕ್ಷೆಯ ಸಮಯ ಎಂದರೆ ತಾಯಿ, ತಂದೆ ಇಬ್ಬರಲ್ಲಿ ಯಾರೊಡನಿರಬೇಕೆಂಬ ಆಯ್ಕೆಯ ಸಂದಿಗ್ಧತೆ ಮಕ್ಕಳಿಗೆ ತೀವ್ರ ನೋವುಂಟು ಮಾಡುವಂಥಹುದು. ಇದೇ ಕಥಾವಸ್ತುವನ್ನು ಹೊಂದಿರುವ ಮನು ಭಂಡಾರಿಯವರ "ಆಪ್ಕಿ ಬಂಟಿ"ಯಲ್ಲಿ (೧೯೭೧) ಬಂಟಿಯ ಹೆತ್ತವರು ದೂರಾಗಿರುತ್ತಾರೆ. ಆ ಸಮಯದಲ್ಲಿ ವಿಚ್ಛೇದನಕ್ಕಾಗಿ ಕಾಯುತ್ತಿರುವ ತಾಯಿಯ ಬಳಿಯಲ್ಲಿರುತ್ತಾನೆ. ಈ ಅವಧಿಯಲ್ಲಿ ತಾಯಿಯ ಪೂರ್ಣ ಗಮನಕ್ಕೆ, ಆಸಕ್ತಿಗೆ, ಪ್ರೇಮಕ್ಕೆ ಪಾತ್ರನಾಗಿದ್ದ ಬಂಟಿ, ನಂತರ ಅವನ ತಾಯಿ ಮಕ್ಕಳಿರುವ ವಿಧುರನೊಬ್ಬನನ್ನು ವಿವಾಹವಾಗಿದ್ದು ನುಂಗಲಾರದ ತುತ್ತು. ಹೊಸ ಪರಿಸರಕ್ಕೆ ಹೊಂದಿಕೊಳ್ಳಲಾಗದೆ ತಳಮಳಿಸುತ್ತಾನೆ. ಅವನ ನಡತೆಯಲ್ಲಿ ತುಂಬ ಬದಲಾವಣೆಗಳಾಗಿ ಈ ಸಮಸ್ಯೆಗಳಿಂದ ದೂರಾಗಲು ಆತನನ್ನು ಅವನ ತಂದೆಯಲ್ಲಿಗೆ ಕಳುಹಿಸಲಾಗುತ್ತದೆ. ಆದರೆ ಆ ತಂದೆಯೂ ಮರು ಮದುವೆಯಾಗಿ ಮತ್ತೊಂದು ಮಗುವಿನ ತಂದೆಯಾಗಿರುತ್ತಾನೆ. ತಾಯಿ ತನ್ನನ್ನು ತಿರಸ್ಕರಿಸಿದ್ದಾಳೆ. ಎಂಬ ಭಾವನೆ ಪ್ರಬಲವಾಗಿ ಪುಟ್ಟ ತಮ್ಮನೊಡನೆಯೂ ಬೆರೆಯಲಾಗದಂಥ ಅಸಹಾಯಕತೆ ಬಂಟಿಗೆ. ಕಡೆಗೆ ಬಂಟಿ ತುಂಬ ಅನಾದರಕ್ಕೊಳಗಾಗಿ, ಸಂಭಾಳಿಸಲು ಅಸಾಧ್ಯನೆನಿಸಿ ಅವನನ್ನು ಬೋರ್ಡಿಂಗ್‌ಗೆ ಕಳುಹಿಸಲಾಗುತ್ತದೆ. ಲೇಖಕಿ ಇಲ್ಲಿ ಯಾವುದೇ ಮೌಲ್ಯಗಳನ್ನು ಪ್ರತಿಪಾದಿಸದೆ, ಮಕ್ಕಳ ಮನದ ಮೇಲೆ ತಾಯ್ತಂದೆಯರ ವಿಚ್ಛೇದನ, ಮರುವಿವಾಹಗಳು ಎಂತಹ ಉದ್ವೇಗ, ಆಕ್ರೋಷಗಳಿಗೆ ಕಾರಣವಾಗುತ್ತವೆಂದು ಸರಳವಾಗಿ ನಿರೂಪಿಸಿದ್ದಾರೆ.

ಅನಿತಾ ದೇಸಾಯಿಯವರ "ವಾಯ್ಸಸ್ ಇನ್ ದಿ ಸಿಟಿ" (೧೯೬೫) ಮುಖ್ಯ ಪಾತ್ರವಾದ ನಿರೋಡ ಸಣ್ಣದಿರುವಾಗಲೇ ತನ್ನ ತಾಯಿ ತಂದೆಯನ್ನು ತೀವ್ರವಾಗಿ ದ್ವೇಷಿಸುತ್ತಿದ್ದುದನ್ನು ಕಂಡುಕೊಂಡಿದ್ದ. ಒಮ್ಮೆ ಪರಪುರುಷರೊಡನೆ ಸಲ್ಲಾಪ ನಡೆಸುತ್ತಿದ್ದ ತಾಯಿಯನ್ನು ಕಂಡ ಮೇಲೆ ಅವನಿಗೆ ತಾಯ ಬಗೆಗಿದ್ದ ಆದರ, ಪ್ರೇಮಗಳು ನಾಶವಾಗಿತ್ತು. ಮಾತೃತ್ವದ ಸಂಪೂರ್ಣತೆ ಭಾವ ದೂರವಾಗಿತ್ತು. ದ್ವೇಷದಿಂದ ತುಂಬಿದ ಅವನಲ್ಲಿ ತಾಯಿ ಎಂದರೆ ರಾಕ್ಷಸಿ, ವಿನಾಶದ ರೂಪಧಾರಿಯಾದ ಕಾಳಿ........ ಎಂಬಿತ್ಯಾದಿ ಕಲ್ಪನೆಗಳು ಮೂಡಿದ್ದವು.

ಅನಿತಾ ದೇಸಾಯಿ ಮತ್ತು ಅಮೃತಾ ಪ್ರೀತಂ ಇಬ್ಬರೂ ತುಂಬ ಪ್ರತಿಭಾನ್ವಿತ ಲೇಖಕಿಯರು. ಅವರ ಬರವಣಿಗೆಯಲ್ಲಿರುವ ಕಾವ್ಯಾತ್ಮಕ ಗುಣ ಅವರಿಬ್ಬರನ್ನು ಇತರರಿಂದ ಭಿನ್ನರಾಗುವಂತೆ ಮಾಡಿದೆ. ಅನಿತಾ ದೇಸಾಯಿ ಪ್ರಮುಖವಾಗಿ ಮನೋ ವಿಶ್ಲೇಷಣಾತ್ಮಕ ಕಾದಂಬರಿಗಳನ್ನು ರಚಿಸಿದ್ದಾರೆ. "ಕ್ರೈ ದಿ ಪೀಕಾಕ್" ಲ್ಲಿ (೧೯೬೩) ಅನಿತಾ ದೇಸಾಯಿ ಕಥಾ

೨೦ನೇ ಪುಟ ನೋಡಿ.

# ಕಾರಣಳೇ?

ಹೆಣ್ಣಿಂದಲೇ ಮಹಾಭಾರತ ನಡೆದದ್ದು ಎಂಬ ಮಾತಿದೆ. ಎಲ್ಲ ಹಿರಿ–ಕಿರಿಯ, ಸ್ತ್ರೀ ಪುರುಷರೆಲ್ಲರೂ ಈ ಮಾತನ್ನು ಹೇಳುತ್ತಾರೆ. ವಿದ್ವಾಂಸರೂ ಒಪ್ಪಿಕೊಂಡಿದ್ದಾರೆ. ಹಾಗೇಯೇ ಬರೆಯುತ್ತಾರೆ. ಹೆಣ್ಣು ಎಲ್ಲ ವಿನಾಶಗಳಿಗೂ ಕಾರಣ ಎಂಬು ದನ್ನು ಸಾಬೀತು ಪಡಿಸಲು ಯತ್ನಿಸುವಾಗ ಈ ಉದಾಹರಣೆ ಯನ್ನು ಕೊಡುತ್ತಾರೆ. ಹೀಗೆ ಹೇಳುವವರು ಕುರುಕ್ಷೇತ್ರಕ್ಕೆ ದ್ರೌಪದಿಯೇ ಕಾರಣಳೆಂದು ತಿಳಿದವರಾಗಿರಬಹುದು. (ಕುರು ಕ್ಷೇತ್ರಕ್ಕೆ ಸಂಬಂಧಿಸಿದಂತೆ ಮಹಾಭಾರತದ ನಾಯಿಕೆಯರೆಂದರೆ ದ್ರೌಪದಿ, ಕುಂತಿ ಮತ್ತು ಗಾಂಧಾರಿ ಮೂವರೇ) ಆದರೆ ಇದು ಸತ್ಯವೇ? ಅಥವಾ ಪುರುಷ ಜಾತಿಯು ಸ್ತ್ರೀ ಜಾತಿಯ ಮೇಲೆ ಹೊರಿಸಿದ ಅಪವಾದವೇ ಇದಾಗಿದೆಯೋ? ಇರಾವತಿ ಕರ್ವೆಯವರು ಬರೆದ "ಯುಗಾಂತ" ದಲ್ಲಿ ದ್ರೌಪ ದಿಯ ಪಾತ್ರವನ್ನು ಚರ್ಚಿಸುವಾಗ ಈ ಮಾತನ್ನು ಪ್ರಸ್ತಾಪಿ ಸಿದ್ದಾರೆ.

ಮಹಾಭಾರತದ ಕುರುಕ್ಷೇತ್ರಕ್ಕೆ ಹಾಗೂ ಕುರುಕ್ಷೇತ್ರದ ಮಹಾಯುದ್ಧದಲ್ಲಿ ಸಂಭವಿಸಿದ ಅಪಾರ ಸಾವು ನೋವುಗಳಿಗೆ ಅನೇಕ ಕಾರಣಗಳಿವೆ. ಮಹಾಭಾರತದುದ್ದಕ್ಕೂ ನಾವು ಶಾಪ ಗಳು ವರಗಳು ಪ್ರತಿಜ್ಞೆಗಳು, ನೀತಿ–ಕುನೀತಿಗಳು ಮತ್ತು ತಂತ್ರ–ಕುತಂತ್ರಗಳ ಸರಣಿಯನ್ನೇ ಕಾಣುತ್ತೇವೆ. ವಿದುರನ ನೀತಿಯಿಂದಾಗಿ ಅಂಧ ಆದರೆ ಮಹತ್ವಾಕಾಂಕ್ಷಿಯಾದ ಧೃತ ರಾಷ್ಟ್ರನ ಪಟ್ಟ ತಪ್ಪಿ ಹೋದದ್ದು, ಕುರುಕ್ಷೇತ್ರಕ್ಕೆ ನಾಂದಿ ಯಾಯಿತೆನ್ನಬಹುದು. ಹತಾಶನಾದ ಧೃತರಾಷ್ಟ್ರ ತನ್ನ ಮಹತ್ವಾಕಾಂಕ್ಷೆಗಳ ಬೀಜವನ್ನು ಪುತ್ರನಾದ ದುರ್ಯೋಧನನ ಹೃದಯದಲ್ಲಿ ನೆಟ್ಟುಬಿಟ್ಟನು. ತನ್ನ ಅಂಧ ಭಾವ ಹಾಗೂ ಕಣ್ಣಿದ್ದೂ ಕುರುಡಿಯಾದ ಸೋದರಿ ಗಾಂಧಾರಿಯರ ಹಿತಚಿಂತಕ ನಾಗಿ ಬಂದು ಸೇರಿದ ಶಕುನಿ ಅದನ್ನು ಪೋಷಿಸಿ ಬೆಳೆಸಿದ. ಅಲ್ಲದೆ ದುರ್ಯೋಧನನ ಅಹಂಕಾರ ದುರಭಿಮಾನಗಳೂ ಕುರುಕ್ಷೇತ್ರ ವನ್ನು ಸಜ್ಜುಗೊಳಿದವು. ಹೀಗೆ ದಾಯಾದಿಗಳ ನಡುವೆ ದ್ವೇಷ ಹೊಗೆಯಾಡತೊಡಗಿತು. ರಾಜ್ಯದ ವಿಭಜನೆ, ಅರಗಿನ ಮನೆಯ ದುರಂತ ಈ ದ್ವೇಷ ಯಾವ ಮಟ್ಟವನ್ನು ತಲುಪಿತೆಂಬುದನ್ನು ತಿಳಿಸುತ್ತವೆ. ಇಲ್ಲಿಯವರೆಗೆ ದ್ರೌಪದಿಯ ಆಗಮನ ಆಗಿರಲೇ ಇಲ್ಲ. ಈ ದ್ವೇಷ ಬೆಳೆಯಲು ಕುಂತಿ ಗಾಂಧಾರಿಯರೂ ಕಾರಣರಲ್ಲ.

ಇನ್ನು ದ್ಯೂತ ಕ್ರೀಡಾ ಭವನದಲ್ಲಿ ಪಾಂಡವರು ದ್ರೌಪದಿ ಸಮೇತ ಎಲ್ಲವನ್ನೂ ಕಳೆದುಕೊಂಡರು. ಹಿರಿಯರೆನಿಸಿಕೊಂಡ ವರ ಎದುರಿನಲ್ಲಿ ದ್ರೌಪದಿಯ ಭಾರೀ ಅಪಮಾನವಾಯಿತು. ಆಗ ಬಿಚ್ಚಿದ ಮುಡಿಯನ್ನು ಅವಳು ಕಟ್ಟಲೇ ಇಲ್ಲ. ಅಲ್ಲದೇ ದುಶ್ಶ್ಯಾಸನನ ರಕ್ತದ ಭಯಾನಕ ಪ್ರತಿಜ್ಞೆಯನ್ನೂ ಮಾಡಿದಳು. ಅಗ್ನಿ ಕನ್ಯೆಯಾದ ಅವಳಿಗೆ ಅದು ಸಹಜವೂ ಆಗಿರಬಹುದು.

ನಂತರ ದ್ರೌಪದಿ ಪಾಂಡವರೊಡನೆ ವನವಾಸಕ್ಕೆ ತೆರಳಿದಳು. ದ್ರೌಪದಿ ಪಾಂಡವರ ಪ್ರತಿಷ್ಠೆಯಾಗಿದ್ದಳು. ವನವಾಸದಲ್ಲಿ ಅವಳು ಧರ್ಮರಾಜನನ್ನು ಯುದ್ಧಕ್ಕೆ ಸಿದ್ಧರಾಗುವಂತೆ ಪದೇ ಪದೇ ಪ್ರೋತ್ಸಾಹಿಸುತ್ತಿದ್ದಳು. ಆದರೆ ಧರ್ಮರಾಜ ಅವಳನ್ನು ನೀತಿ ಹೇಳಿ ಶಾಂತಗೊಳಿಸುತ್ತಿದ್ದ. ಹಸ್ತಿನಾಪುರಕ್ಕಿಂತ ಅವಳ ಅಪಮಾನ ದೊಡ್ಡದಲ್ಲ. ಎಂದು ಪಾಂಡವರೂ, ಶ್ರೀಕೃಷ್ಣನೂ ಅವಳಿಗೆ ತಿಳಿಸಿ ಹೇಳುತ್ತಿದ್ದರು. ಯುದ್ಧವನ್ನು ತಡೆಯಲು ಎಲ್ಲ ಪ್ರಯತ್ನಗಳನ್ನೂ ಮಾಡಿದರು. ಪಾಂಡವರು ದ್ರೌಪದಿ ಗಾಗಿ ಯುದ್ಧವನ್ನು ಮಾಡುವ ನಿರ್ಧಾರ ಮಾಡಿದ್ದರೆ ಪದೇ ಪದೇ ಸಂಧಿಗಾಗಿ ಯತ್ನಿಸುತ್ತಿರಲಿಲ್ಲ. ಕೊನೆಯಲ್ಲಿ ಐದು ಗ್ರಾಮಗಳನ್ನು ಕೊಟ್ಟರೂ ಸಾಕು ಎಂದು ಬೇಡುತ್ತಿರಲಿಲ್ಲ. ಸೂಜಿಯ ಮೊನೆಯಷ್ಟು ಭೂಮಿಯೂ ಸಿಗದು ಎಂದಾಗ ಮಾತ್ರ ಯುದ್ಧ ಅನಿವಾರ್ಯವಾಯಿತು. ಶೂರರಾದ ಪಾಂಡ ವರು ಈಗಲೂ ಸುಮ್ಮನೆ ಕೂಡುವುದು ಸಾಧ್ಯವಿರಲಿಲ್ಲ. ಬಾಗಿಲಿಗೆ ಬಂದು ನಿಂತ ಯುದ್ಧವನ್ನು ಸ್ವಾಗತಿಸಿದರು. ಶ್ರೀ ಕೃಷ್ಣನ ಸಹಾಯವೂ ಇತ್ತು. ಶೌರ್ಯದಿಂದ ಕಾದಾಡಿದರು. ದ್ರೌಪದಿಯ ಪ್ರತಿಜ್ಞೆಯನ್ನು ಪೂರ್ತಿ ಮಾಡಿದರು. ದ್ರೌಪ ದಿಯ ಒಂದು ಪ್ರತಿಜ್ಞೆಗಾಗಿ ಯುದ್ಧ ಆಯಿತು, ಎನ್ನುವುದ ರಲ್ಲಿ ಮಾತ್ರ ಅರ್ಥವಿಲ್ಲ. ಮೊದಲೇ ಹೇಳಿದಂತೆ ಮಹಾಭಾರತ ದಲ್ಲಿ ಪ್ರತಿಯೊಬ್ಬ ವ್ಯಕ್ತಿಯ ಸುತ್ತಲೂ ಶಾಪಗಳು, ಪ್ರತಿಜ್ಞೆ ಗಳು ಸುತ್ತುತ್ತಲೇ ಇದ್ದವು. ಇನ್ನು ಕುಂತಿ ಕೊನೆಯಲ್ಲಿ ಶ್ರೀ ಕೃಷ್ಣನೆಡೆಗೆ ತನ್ನ ಮಕ್ಕಳಿಗಾಗಿ ಒಂದು ಸಂದೇಶವನ್ನು ಕಳಿಸಿದ್ದಳು. ಆದರೆ ಆಗಲೇ ಯುದ್ಧ ನಿಶ್ಚಿತವಾಗಿತ್ತು. ಗಾಂಧಾರಿಯದಂತೂ ಹೇಳುವುದೇ ಬೇಡ.

ಹಾಗಾದರೆ ಕುರುಕ್ಷೇತ್ರಕ್ಕೆ ಯಾವ ಹೆಣ್ಣು ಕಾರಣಳು? ಯಾವ ಅರ್ಥದಲ್ಲಿ ಕಾರಣಳು?

**ಉಜ್ವಲಾ ಪುಣಜಗೌಡ**

---

ಓ! ಹೆಣ್ಣೇ............

ಘೋರತನದಲ್ಲೂ ಸೌಮ್ಯತೆ,
ಭೀಕರತೆಯಲ್ಲೂ ಸುಂದರತೆ,
ನೋವಿನಲ್ಲೂ ನಗೆಯ ಬುಗ್ಗೆ,
ದುಃಖದಲ್ಲೂ- ಸುಖದ ಮುಖವಾಡದಲ್ಲಿ,
ಸತ್ಯಾಸತ್ಯತೆಯ ವಿಮರ್ಶೆ ನೀಡುವರಾರು?
ಇಂದು ನಿನಗೆ?

ಶಕುಂತಲಾ ಎಸ್.
ಕಾಡುಗುಡಿ

# ಬುದ್ಧ ಚರಿತ್ರೆಯಲ್ಲಿ ಮಾತೃ ಸ್ಥಾನ

ಭಾರತದಲ್ಲಿ ಬೌದ್ಧ ಧರ್ಮಕ್ಕೆ ಮುನ್ನ ನಾರಿಯರ ಸ್ಥಾನ ಅತ್ಯಂತ ಕೆಳಮಟ್ಟದಲ್ಲಿತ್ತು. "ಗೌರವ"ವವನ್ನೇ ಕಾಣದವರಾಗಿದ್ದರು. "ಮಗಳು, ಪುತ್ರಿ" ಶಬ್ದಗಳು ಆತಂಕಕ್ಕೆ ಕಾರಣವಾಗಿತ್ತಲ್ಲದೆ ಅವಳಿಗೆ ಮದುವೆ ಮಾಡಲಾಗದಿದ್ದಲ್ಲಿ ಅಪಕೀರ್ತಿಗೆ ಗುರಿಯಾಗಬೇಕಾದ ಪರಿಸ್ಥಿತಿ. ಒಂದು ವೇಳೆ ವಿವಾಹ ಮಾಡಿದರೂ ಅದರ ಖರ್ಚಿನ ಹೊರೆ ಹೊರಲಾರದಂಥ ಸ್ಥಿತಿ. ಉತ್ತರ ಕ್ರಿಯೆಗಳಿಗೆ, ಸಾಂಪ್ರದಾಯಿಕ ವಿಧಿ-ವಿಧಾನಗಳಿಗೆ ಹೆಣ್ಣು ಮಕ್ಕಳ ಅಗತ್ಯವಿಲ್ಲ ಎಂಬುದಕ್ಕಾಗಿಯೇ ಹೆಣ್ಣೆಂದರೆ ತಾತ್ಸಾರ. ಕೇವಲ ಮಗನನು ಪಡೆಯುವುದಕ್ಕಾಗಿ ಪತ್ನಿಯ ಅವಶ್ಯಕತೆಯಿರುತ್ತಿತ್ತು. ಜೀವನವಿಡೀ ತಂದೆಯ ಇಲ್ಲವೆ, ಗಂಡನ ಅಧೀನದಲ್ಲಿರಬೇಕಾದ ಅವಳು ಸಾರ್ವಜನಿಕ ಚಟುವಟಿಕೆಗಳಲ್ಲಿ ಭಾಗವಹಿಸುವಂತಿರಲಿಲ್ಲ, ತನ್ನ "ಸಂತಾನ" ದಿಂದಷ್ಟೇ ಅಲ್ಪ ಸ್ವಲ್ಪ ಸ್ವಾತಂತ್ರ್ಯ ತನ್ನ ಮನೆಯೊಳಗಿತ್ತು. ವಿಧವೆಯರು ತಂದಗೇ ಹೊರೆಯಾಗಿ ಜೀವಿಸಬೇಕಿತ್ತು.

ಬುದ್ಧ ಸ್ತ್ರೀ ಪುರುಷರೆನ್ನದೆ ಸರ್ವರಿಗೂ ಧರ್ಮಬೋಧಿಸಿದ ಪರಿಣಾಮವಾಗಿ ಪುರುಷರು ಸ್ತ್ರೀಯರಿಗೆ ತಮ್ಮ ನಂತರದ ಸ್ಥಾನ ಕೊಡಲು ಪ್ರಾರಂಭಿಸಿದ್ದರು. ಅವರ ಸುತ್ತ ಬಿಗಿದಿದ್ದ ಸಂಕಲೆಗಳೂ ಸಡಿಲವಾಗುತ್ತಾ ಆಧ್ಯಾತ್ಮಿಕ, ಸಾಮಾಜಿಕ ಚಟುವಟಿಕೆಗಳಲ್ಲೂ ಗೃಹಕೃತ್ಯದ ಜೊತೆ ಜೊತೆಗೆ ಭಾಗವಹಿಸಲು ಪ್ರಾರಂಭಿಸಿದ್ದರು. ಬೋಧನೆಯಲ್ಲಿ ಸ್ತ್ರೀಯರನ್ನು ಸೌಶೀಲ್ಯ, ಸೂಕ್ಷ್ಮತೆಗಳಿಗೆ ಉದಾಹರಣೆಗಳಾಗಿ ಬಳಸಿದ್ದನ್ನೂ ಕಾಣಬಹುದು. ಅವಿವಾಹಿತರು ಕೀಳರಿಮೆಗೆ ಒಳಗಾಗಬೇಕಾದ ಪರಿಸ್ಥಿತಿ ದೂರವಾಗಿ, ಕೆಲವು ಸಂದರ್ಭಗಳಲ್ಲಿ ತಮ್ಮ ಪತಿಯ ಆಯ್ಕೆಯಲ್ಲಿ ಭಾಗವಹಿಸುತ್ತಿದ್ದರು. ಪತ್ನಿಯು ಈ ಮುನ್ನಿನಂತೆ ಗುಲಾಮಳೆಂದು ಪರಿಗಣಿತಳಾಗದೆ, ಗೃಹಸ್ವಾಮಿನಿಯಾಗಿ, ತನ್ನ ಗಂಡನ ಲೌಕಿಕ, ಆಧ್ಯಾತ್ಮಿಕ ಚಿಂತನೆಗಳಲ್ಲಿ ಜೊತೆಗಾತಿಯಾಗಿರುತ್ತಿದ್ದಳು. "ಮಾತೃತ್ವ"ಕ್ಕಂತೂ ಅಭೂತಪೂರ್ವವಾದ ಗೌರವ, ಆದರ, ಪೂಜ್ಯ ಸ್ಥಾನವಿತ್ತು. ವಿಧವೆಯರೂ ಅಮಂಗಳದ ಶಕುನವೆನಿಸದೆ ಶುಭಕಾರ್ಯಗಳಲ್ಲೂ ಭಾಗವಹಿಸುತ್ತಿದ್ದರು.

ಮಾತೃತ್ವದಿಂದಲೇ ಸ್ತ್ರೀಯರ ಬೆಲೆ ಅನನ್ಯ ಮಟ್ಟಕ್ಕೇರಿತು. ಕಿಸಾಗೋತಮಿ ಯಾರ ಮಗಳೆಂದು ಯಾರಿಗೂ ತಿಳಿದಿರಲಿಲ್ಲ. ವಿವಾಹವಾದ ಮೇಲೆ ಸಾಮಾನ್ಯರಲ್ಲಿ ಸಾಮಾನ್ಯ ಮಹಿಳೆಯಂತಿದ್ದವಳಿಗೆ ತಾಯ್ತನ ಒಮ್ಮೆಲೆ ಆದರ ಒದಗಿಸಿತ್ತು ಸಮಾಜದಲ್ಲಿ. ಬೌದ್ಧ ಚರಿತ್ರೆಯಲ್ಲಂತೂ ಇಂದಿಗೂ ಜೀವಂತ ಕಥನವೆನ್ನಬಹುದಾದ ವ್ಯಕ್ತಿತ್ವಕ್ಕೆ ಕಾರಣವಾಗಿತ್ತು. ಸಂಸ್ಕೃತ, ಜೈನ, ಪಾಲಿಗ್ರಂಥಗಳಲ್ಲಿಯೂ ಮಾತೃತ್ವಕ್ಕೆ ಪ್ರಥಮ ಸ್ಥಾನವಿರುವುದಾದರೂ ಅದರ ಉಲ್ಲೇಖ ಎಲ್ಲೆಡೆ ಕಾಣುವುದಿಲ್ಲ. ತಾಯಿಯ ಹೆಸರಿನಿಂದ ತನ್ನನ್ನು ಪರಿಚಯಿಸಿಕೊಳ್ಳುವ ಪರಿ ಪುನಃ ಬುದ್ಧ ಶಕೆಯಲ್ಲಿ ಪ್ರಾರಂಭವಾಗಿತ್ತು.

ಮಕ್ಕಳು ತಮ್ಮ ತಾಯ್ತಂದೆಗಳನ್ನು ನೋಡಿಕೊಂಡು, ಸೇವೆ ಮಾಡುತ್ತಾ ಅವರ ಋಣ ತೀರಿಸುವುದು, ಮನೆತನದ ಸಂಪ್ರದಾಯ, ಸಂಸ್ಕೃತಿ, ಗೌರವಗಳನ್ನು ಬಿಡದೆ ಪಾಲಿಸಿಕೊಂಡು ಬರಬೇಕಾದುದು ಅತ್ಯಗತ್ಯದ ಕರ್ತವ್ಯವೆಂದು ಪರಿಗಣಿಸಲ್ಪಟ್ಟಿದೆ. ಗೌತಮ, "ತಾಯಿಯನ್ನು, ತಂದೆಯನ್ನು ಮಾನವೀಯತೆಯಿಂದ ನೋಡಿಕೊಳ್ಳಬೇಕು-ಅಣ್ಣಂದಿರು, ಗುರುಗಳನ್ನೂ ಸಹ" ಎಂದು ಹೇಳಿರುವಲ್ಲಿ "ತಾಯಿ"ಗೆ ಪ್ರಥಮ ಪದ. "ಮುದಿತನದಿಂದ ನರಳುತ್ತಿರುವ, ಯೌವನ ಕಳೆದುಕೊಂಡು ಅಶಕ್ತರಾದ ಹೆತ್ತವರನ್ನು ನೋಡಿಕೊಳ್ಳದ ಮಗ ಭ್ರಷ್ಟ. ತಾಯಿ, ತಂದೆ, ಸಹೋದರ, ಸಹೋದರಿ, ಅತ್ತೆಯವರನ್ನು ಹೊಡೆದು ಬೈದು ಹಿಂಸಿಸುವವನು ಅತ್ಯಂತ ಪತಿತ"; "ತಾಯ್ತಂದೆಯರನ್ನು ಆದರಿಸುವವನು ಸ್ವರ್ಗದ ಎಲ್ಲ ಸುಖಗಳನ್ನೂ ಅನುಭವಿಸುತ್ತಾನೆ" ಎಂದು ಬೋಧಿಸುತ್ತಾನೆ.

ತಾಯಿ ತನ್ನ ಕೌಶಲ್ಯ, ಮಮತೆ, ವಾತ್ಸಲ್ಯಗಳಿಂದ ಮಕ್ಕಳನ್ನು ಸುಗುಣಿಗಳನ್ನಾಗಿ, ಸತ್ಪ್ರಜೆಗಳನ್ನಾಗಿ ರೂಪಿಸಬೇಕಾಗಿತ್ತು. ತಾಯಂದಿರು ತಮ್ಮ ಕರುಳ

ಕುಡಿಗಾಗಿ ಎಂಥ ತ್ಯಾಗಕ್ಕೂ, ಅವಘಡಕ್ಕೂ ಹಿಂದಾಗುತ್ತಿರಲಿಲ್ಲ. ಈ ಕೆಳಗೆ ಕೆಲವು ಘಟನೆಗಳನ್ನು ನೀಡಲಾಗಿದೆ.

ಅಮಾನುಷ ರೂಪದ ಕುರೂಪಿ ಮಗ ಎಲ್ಲರ ತಿರಸ್ಕಾರಕ್ಕೆ ಗುರಿಯಾಗಿದ್ದುದರಿಂದ ತಾಯಿಗೆ ಹಿಡಿ ಭಿಕ್ಷೆಯೂ ದೊರೆಯುತ್ತಿರಲಿಲ್ಲ. ಆದರೂ ಮಗನನ್ನು ತಿರಸ್ಕರಿಸದೆ, ಕಡು ಬಡತನದಲ್ಲಿ ಬೇಯುತ್ತಿದ್ದ ತಾಯಿ ತನ್ನ ಮಗನ ಹೊಟ್ಟೆಯ ಚಿಂತೆಯಲ್ಲಿ ನುಗ್ಗಾಗಿ ಮಗನನ್ನು ಮನೆಯಲ್ಲಿ ಬಿಟ್ಟು ಭಿಕ್ಷೆಗೆಂದು ಹೊರಡುವ ಸನ್ನಿವೇಶ ಹೃದಯ ಸ್ಪರ್ಶಿಯಾಗಿ ಬುದ್ಧ ಚರಿತ್ರೆಯಲ್ಲಿ ಮೂಡಿದೆ. ತಾಯಿ ತಂದೆಯರ ವಾತ್ಸಲ್ಯದಲ್ಲಿ ಎಷ್ಟು ವ್ಯತ್ಯಾಸವಿದೆ ಎಂಬುದಕ್ಕೆ ಒಂದು ನಿದರ್ಶನ— ಪ್ರಯಾಣದ ಮಾರ್ಗ ಮಧ್ಯದಲ್ಲಿ ತಂದೆ, ಮಗುವನ್ನು ದಾರಿಯಲ್ಲೇ ಬಿಟ್ಟು ಹೋಗುವ ಎಂದು ಎಷ್ಟು ಒತ್ತಾಯಿಸಿದರೂ ಕಂದನನ್ನು ಎತ್ತಿಕೊಂಡಿದ್ದ ತಾಯಿ ಒಪ್ಪದೆ ಕಡು ನಿರ್ಧಾರ ತಾಳಿರುತ್ತಾಳೆ. "ಮುಂದೆ ನಮಗೆ ಮಗುವಾಗುವ ಸಂಭವವಿದೆ"—ಎಂಬ ಗಂಡನ ಮಾತಿಗೆ "ಜೀವದಿಂದಿರುವ ಮಗುವನ್ನು ತೊರೆಯಲಾರೆ" ಎಂದು ಖಡಾಖಂಡಿತವಾಗಿ ನುಡಿದಿದ್ದಳು. ತಾನು ಮಗು ಎತ್ತಿಕೊಳ್ಳುವ ಸಂದರ್ಭ ಬರುವವರೆಗೂ ಕಾದಿದ್ದ ಗಂಡ ಹೊಂಚಿ, ಮಗನನ್ನು ಪೊದೆಯೊಂದರ ಬಳಿ ಬಿಟ್ಟು ಪ್ರಯಾಣಿಸುತ್ತಾನೆ. ಈ ಕುತಂತ್ರದ ಅರಿವಾದ ಕೂಡಲೆ ತಾಯಿ ದುಃಖಿತಪ್ತಳಾಗಿ ಭ್ರಮೆಗೊಳ್ಳುತ್ತಾಳೆ. "ಈ ರೀತಿ ನನ್ನನ್ನು ಕೊಲ್ಲಬೇಡ" ಎಂದು ಎದೆ ಎದೆ ಬಡಿದುಕೊಂಡು ವಿಲಾಪಿಸುತ್ತಾಳೆ. ಅವಳ ಮನ ಮುಂದಿರದಲ್ಲಿ ತನ್ನವರೆನ್ನುವವರಿಲ್ಲದೆ, ಒಂಟಿಯಾಗಿ, ಭಯ, ಆತಂಕಗಳಿಂದ ಪರಿತಪಿಸಿ ಅಳುತ್ತಿರುವ ತನ್ನ ಮುದ್ದು ಕಂದನ ಚಿತ್ರ ಕಾಣುತ್ತಿರುತ್ತಾಳೆ. ಈ ಕಲ್ಪನಾ ಶಕ್ತಿ, ಸಂವೇದನೆಗಳು ಮಾತೃ ಹೃದಯಕ್ಕೆ ಮಾತ್ರವೇ ಅರ್ಥವಾಗುವುದು. ಕಡೆಗೂ ತನ್ನ ಮಗುವನ್ನು ಪಡೆದುಕೊಳ್ಳುವಲ್ಲಿ ಯಶಸ್ವಿಯಾಗುತ್ತಾಳೆ.

ಹೃದಯ ನಡುಗಿಸುವ ಭೀಕರ ಘೋರ ಅಂಗುಲಿಮಾಲನ ತಾಯಿಯ ಅಂತಃಕರಣವನ್ನೂ ಇಲ್ಲಿ ಪರಿಚಯಿಸಲಾಗಿದೆ. ಆತನ ತಂದೆ, ಈ ಮಗನನ್ನು ನನ್ನ ಮಗ ಎಂದು ಎಂದಿಗೂ ನಾ ಒಪ್ಪಿಕೊಳ್ಳೆ ಎಂದು ನಿರ್ಧರಿಸಿ, ಮಗನ ಅಪರಾಧ ಕಡಿಮೆಮಾಡಿಸಲೂ ಯತ್ನಿಸದೆ, ಆತ ಶಿಕ್ಷೆಗೆ ಗುರಿಯಾಗದಂತೆ ಮಾಡಲೂ ಬಯಸುವುದಿಲ್ಲ. ಆದರೆ ತಾಯಿಯ ಕರುಳ ಬಂಧ ಹಾಗೆ ಸುಲಭವಾಗಿ ಮಗನನ್ನು ಬಿಟ್ಟು ಕೊಡಲೊಪ್ಪದೆ "ನನ್ನ ಮಗನನ್ನು ಬುದ್ಧಿ ಹೇಳಿ ಹಿಂದಕ್ಕೆ ಕರೆತರುತ್ತೇನೆ." ಎಂದು ಹೊರಡುತ್ತಾಳೆ. ತಾಯಂದಿರು ತಮ್ಮ ಹೆಣ್ಣು ಮಕ್ಕಳ ಬಗ್ಗೆಯೂ ಹೀಗೇ ನಡೆದುಕೊಳ್ಳುತ್ತಾರೆ. ಉಬ್ಬರಿ ತನ್ನ ಮಗಳು ಸಾವಿಗೀಡಾದಾಗ ಪಡುವ ಯಾತನೆ, ಸುಮೇದೆ, ಧರ್ಮ ದೀಕ್ಷೆ ಕೈಗೊಳ್ಳಲು ಹೊರಟಾಗ ಆಕೆಯ ತಾಯಿಯ ವೇದನೆಯ ಹೃದಯಸ್ಪರ್ಶಿ ಚಿತ್ರಣವಿದೆ. ತಾಯಿಪ್ರೇಮ ಗಂಡು ಮಕ್ಕಳು, ಹೆಣ್ಣು ಮಕ್ಕಳು ಎಂಬ ಭೇದವಿಲ್ಲದೆ ಒಂದೇ ಸಮನೆ ಇರುತ್ತಿತ್ತು. ಅಲ್ಲೊಂದು ಇಲ್ಲೊಂದು ತಾಯಿಯನ್ನು ಅನಾದರಿಸಿದಂಥ ಸಂದರ್ಭಗಳನ್ನು ಕಾಣಬಹುದಾಗಿದೆ. ತನ್ನ ಮಕ್ಕಳು—ಅಳಿಯಂದಿರು, ಸೊಸೆಯರ ಅನಾಧರಣೆ ಸಹಿಸದೆ ದೀಕ್ಷೆ ಕೈಗೊಂಡ ವಿಧವೆಯ ಪ್ರಸ್ತಾಪವೂ ಇದೆ. ಮತ್ತೊಬ್ಬ ವ್ಯಾಪಾರಿಯ ಪತ್ನಿಗೆ ೭ ವರ್ಷಗಳಿಂದ ಸತತವಾಗಿ ಪೀಡಿಸುತ್ತಿದ್ದ ಶಿರೋವೇದನೆಯನ್ನು ಗುಣಪಡಿಸಿದ ವೈದ್ಯನಿಗೆ ಆಕೆಯ ಪತಿ, ಮಗ—ಸೊಸೆ ಅಪಾರ ಧನ ನೀಡಿ ಕೃತಜ್ಞತೆ ವ್ಯಕ್ತಪಡಿಸುತ್ತಾರೆ. ಹೆತ್ತವರನ್ನು ಆದರಿಸದೆ, ಸೇವಿಸದೆ, ಅವರಿಗೆ ದ್ರೋಹ ಬಗೆದರೆ ಅದು ಬಹು ಗಂಭೀರ ಅಪರಾಧವಾಗಿತ್ತು. ಅದನ್ನು ಚರ್ಚಿಸುವುದೂ ಪಾಪವೆಂಬ ಭಾವನೆ ಪ್ರಬಲವಾಗಿತ್ತು. "ತಾಯಿಯ ಅಥವಾ ತಂದೆಯ ಜೀವ ತೆಗೆಯುವುದು ಜ್ಞಾನಿಗೆ ಅಸಾಧ್ಯ, ಆದರೆ ಸಾಮಾನ್ಯನಿಗೆ ಸಾಧ್ಯ." ಎಂಬಲ್ಲಿ "ಮಾತೃ" ಪದಕ್ಕೆ ಮೊದಲು ಪ್ರಯೋಗವಾಗಿದೆ. ಬೌದ್ಧ ಸಮಾಜದಲ್ಲಿ ಮಾತೃದ್ರೋಹ, ಪಿತೃದ್ರೋಹಗಳ ಬಗ್ಗೆ ನಿಖರವಾದ ಅಂಕಿ ಅಂಶಗಳು ಸಿಗವುದಿಲ್ಲವಾದರೂ, ಕೆಲವು ಸಂದರ್ಭಗಳಲ್ಲಿ ಅವರ ಅರಿವಿಗೇ ಬಾರದಂತೆ ನಡೆದು ಹೋದ ಘಟನೆಗಳೂ-ಅಪರಾಧವೆನಿಸಿದವು. ಮಾತೃದ್ರೋಹಿ, ಪಿತೃದ್ರೋಹಿಗಳು ಜ್ಞಾನ ಸಾಧನೆಗೆ ಅರ್ಹರಲ್ಲ ಎಂದು ಗೌತಮ ಬೋಧಿಸಿರುವುದನ್ನು ಗ್ರಂಥಗಳಲ್ಲಿ ಕಾಣಬಹುದಾಗಿದೆ.

(ಮೂಲ: ವಿಮೆನ್ ಅಂಡರ್ ಪ್ರಿಮಿಟಿವ್ ಬುದ್ಧಿಸಂ)

# ಪಂಜರದ ಗಿಣಿ

ನಾನೊಂದು ಪಂಜರದ ಗಿಣಿ
ಪಂಜರ ಚಿಕ್ಕದಲ್ಲ ವಿಶಾಲ
ವಾಗಿದೆ ಸಾಕಷ್ಟು ಅದರಲ್ಲೆ
ಬಡಿಯಬಹುದು ರೆಕ್ಕೆ
ಬೇಕಾದಷ್ಟು, ಹಾರಗೊಡುವುದಿಲ್ಲ
ನನ್ನೆಜಮಾನ ಹೊರಗೆ
ಪುಟ್ಟಹಕ್ಕಿ ಹೋಗಬೇಡ
ಹಿಡಿದೀತು ಕೆಟ್ಟಬೆಕ್ಕು ನಿನ್ನ
ದೊಡ್ಡ ಗಿಡುಗ ಕಚ್ಚಿ ಒಯ್ದೀತು.



ನನ್ನ ಮುದ್ದಿನ ಗಿಣಿಯೆ
ನೀನಿಲ್ಲೆ ಇರು ತಿನ್ನು ಹಣ್ಣು
ಹಂಪಲು ಬೇಕಾದಷ್ಟು ಎಂದು
ಮುದ್ದಿಸುತ್ತಾ ಕಲಿಸುತ್ತಾನೆ
ಮುದ್ದು ಮುದ್ದು ಮಾತುಗಳ
ಅವ ನೀಡಿದ ಹಣ್ಣು ಸವಿಯುತ್ತಾ
ಅವ ಕಲಿಸಿದ ಮಾತಾಡುತ್ತಾ
ರೆಕ್ಕೆ ಬಡಿಯುತ್ತಾ ಹಾಡುವ
ಅಭ್ಯಾಸ ಮಾಡಿಕೊಂಡಿದ್ದೇನೆ
ನನ್ನ ಪಂಜರದಲ್ಲಿ, ನಾ ಸುಖಿ

ಕಣ್ಣು ಹಾಯಿಸಿದರೆ ವಿಶಾಲ
ಜಗತ್ತು ಕಾಣಿಸುತ್ತದೆ ನನ್ನ
ಪಂಜರದಾಚೆ, ದೂರ ದೂರ
ಹಾರುವ ಆಸೆಗೆ ತೆರೆಯುವುದಿಲ್ಲ
ಪಂಜರದ ಬಾಗಿಲು
ನನ್ನೊಡೆಯ ಹೇಳುವ ಕೆಟ್ಟ
ಬೆಕ್ಕು ಗಿಡುಗ ನೆನಪಾಗಿ
ಮುದುಡಿಕೊಳ್ಳುತ್ತೇನೆ ಪಂಜರದೊಳಗೆ
ನನ್ನೊಡೆಯನ ಬರವನ್ನು ಕಾಯುತ್ತಾ

ಪ್ರೇಮಾವತಿ
ಹೊಸಕೊಪ್ಪ

# ಮೌನ ಮಾತಾದಾಗ

ಸ್ತ್ರೀಯರಲ್ಲಿ ಮೂಡುತ್ತಿರುವ ಜಾಗೃತಿ ಹಾಗೂ ಬದಲಾಗುತ್ತಿರುವ ಸಾಮಾಜಿಕ ಪರಿಸರ ದಿಂದಾಗಿ ಸ್ತ್ರೀಯರ ಸಮಸ್ಯೆಗಳನ್ನು ನೋಡುತ್ತಿರುವ ದೃಷ್ಟಿಕೋನಗಳು ಬದಲಾಗುತ್ತಿವೆಯಲ್ಲವೆ? ಇಂತಹ ಆಲೋಚನೆ, ವಿಚಾರಗಳು ಅಸ್ಪಷ್ಟವಾಗಿದ್ದು ವೈರುಧ್ಯಗಳಿಂದ ಕೂಡಿರಬಹುದು. ಮಹಿಳಾ ಶೋಷಣೆ, ಕೌಟುಂಬಿಕ ಜವಾಬ್ದಾರಿ, ವಿವಾಹ ಪದ್ಧತಿ, ವರದಕ್ಷಿಣೆ, ಅಸಮಾನವೇತನ ಮುಂತಾದ ವಿಷಯಗಳ ಸುತ್ತ ನಿಮ್ಮ ಸ್ವಂತ ವಿಚಾರಗಳನ್ನು ಹಾಗು ಅನುಭವಗಳನ್ನು ಪುಟ್ಟ ಲೇಖನದ ರೂಪದಲ್ಲಿ ಬರೆದು ಕಳಿಸಿದ ಲೇಖನಗಳಿಗೆಂದು "ಮೌನ ಮಾತಾದಾಗ" ಅಂಕಣವಿದೆ. ಪ್ರಕಟವಾದ ಲೇಖನಗಳಿಗೆ ಪ್ರತಿಕ್ರಿಯೆಗಳನ್ನು ಪ್ರಕಟಿಸಲಾಗುವುದು.

ಸಂ. ಮಂ.

---

ಈ ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣಿನ ಮಾತಿಗೆ, ಗೌರವಕ್ಕೆ ಬೆಲೆ ಇಲ್ಲ. ಗಂಡು-ಹೆಣ್ಣು ಸಮಾನರೆಂದು ಮೇಲು ನೋಟಕ್ಕೆ ಈ ಸಮಾಜ ಸಾರಿದರೂ ಗಂಡು ಹೆಣ್ಣಿನ ಮೇಲೆ ತನ್ನ ದರ್ಪವನ್ನು ತೋರಿಸುತ್ತಲೇ ಇದ್ದಾನೆ. ವಿದ್ಯಾವಂತೆಯಾದ ಹೆಣ್ಣು ತನ್ನ ಮೇಲಿನ ಅನ್ಯಾಯ, ಶೋಷಣೆಯನ್ನು ಧೈರ್ಯವಾಗಿ ಎದುರಿಸುತ್ತಾಳಾದರೂ, ಅವಿದ್ಯಾವಂತೆಯರ ಪಾಡು ತೀರಾ ಶೋಚನೀಯವಾಗಿದೆ. ನಾ ಕಂಡಂತೆ, "ಸುಶೀಲ" ಎಂಬ ಮುಗ್ಧೆಗೆ ಇತ್ತೀಚಿಗೆ ಮದುವೆಯಾಯ್ತು. ರೂಪದಲ್ಲಿ ಸ್ವಲ್ಪ ಕಪ್ಪಾದರೂ ಗುಣದಲ್ಲಿ ಉತ್ತಮಳು. ತನ್ನ ತಂದೆ, ತಾಯಿ ನೋಡಿದ ಮಧ್ಯಮ ವರ್ಗದ ಹುಡುಗನೊಂದಿಗೆ ಮದುವೆ ನಡೆಯಿತು. ಆ ಹುಡುಗನಿಗೆ ತಂದೆ ಇಲ್ಲ. ತಾಯಿ ಇದ್ದಾಳೆ. ಸಹೋದರರಾರು ಇಲ್ಲ. ತಂದೆ ಸರ್ವಿಸ್ ಹುದ್ದೆಯಲ್ಲಿದ್ದಾಗ ಆಕಸ್ಮಿಕವಾಗಿ ತೀರಿಕೊಂಡದ್ದರಿಂದ ಬಹಳಷ್ಟು ಹಣ ಮಗನ ಮತ್ತು ತಾಯಿಯ ಪಾಲಾಯ್ತು. ಮದುವೆಯಾದ ಒಂದು ತಿಂಗಳು ಎಲ್ಲವೂ ಸುಖಮಯವಾಗಿತ್ತು. ಅನಂತರ ಇದ್ದಕ್ಕಿದ್ದಂತೆ ಹುಡುಗ ಹುಡುಗಿಯ ಬಗ್ಗೆ ಇಲ್ಲಸಲ್ಲದ ಟೀಕೆ ಮಾಡಲು ಆರಂಭಿಸಿದ, ಹುಡುಗಿ ಕಪ್ಪು ಬಣ್ಣದವಳೆಂದು, ಕುಳ್ಳಿಯೆಂದು ಹಿಯಾಳಿಸಲು ಆರಂಭಿಸಿದ. ಈಗ್ಗೆ ಇವರಿಗೆ ಮದುವೆಯಾಗಿ ಒಂದು ವರ್ಷವಾದರೂ ಆಕೆಯನ್ನು ಈತ ಮನಸಾರೆ ಒಂದು ದಿನವೂ ಮಾತನಾಡಿಸಿಲ್ಲ, ಅತ್ತೆಯಾದವಳು ಮಗನ ಮೂಲಕ ಈಕೆಯನ್ನು ಬೈಸುವುದು, ಹೊಡೆಸುವುದರಲ್ಲಿ ಮುಂದಾಗಿದ್ದಾಳೆ. ಹಣಕ್ಕೇನೂ ಕೊರತೆ ಇರದ ಈತನಿಗೆ ಕುಡಿತದ ಚಟ, ಹೆಂಡತಿಯೊಡನೆ ಅನಗತ್ಯವಾಗಿ ಜಗಳ ತೆಗೆದು ದೈಹಿಕವಾಗಿ ಹಿಂಸಿಸುವುದು. ನೆರೆಯವರು ಎಷ್ಟು ಬಾರಿ ಈಕೆಯ ರಕ್ಷಣೆಗೆ ಬಂದರೂ ಲೆಕ್ಕಿಸದೆ ಮುಂದುವರಿಯುತ್ತಿದ್ದಾನೆ. ಈ ಸುದ್ದಿ ತಿಳಿದ ಹುಡುಗಿಯ ತಂದೆ-ತಾಯಿ ಮಗಳನ್ನು ವಾಪಸ್ಸು ತವರೂರಿಗೆ ಶಾಶ್ವತವಾಗಿ ಕರೆದ್ಯೊಲು ಬಂದರೆ, ಅದಕ್ಕೆ ಈಕೆ ಒಪ್ಪುವುದಿಲ್ಲ. ಸಾಯುವವರೆಗೂ ಗಂಡನ ಮನೆಯೇ ಗತಿಯೆಂದು ಹಟ ಹಿಡಿದಿದ್ದಾಳೆ. ಕೆಲವು ದಿನಗಳ ಹಿಂದೆ ಸೀಮೆಎಣ್ಣೆ ಸುರಿದು, ಇಲಿ ವಿಷಕುಡಿಸಿ ಆಕೆಯನ್ನು ಹತ್ಯೆಗೆಯ್ಯಲು ಯತ್ನಿಸಿ ವಿಫಲನಾದ. ವಿಚಾರಿಸಲಾಗಿ ಆತ್ಮಹತ್ಯೆಗೆ ಯತ್ನಿಸಿದಳೆಂದು ಪುಕಾರೆಬ್ಬಿಸಿದ. ಈ ವಿಷಯದಲ್ಲಿ ಆಕೆಗೆ ಎಷ್ಟು ಬುದ್ಧಿ ಹೇಳಿ ತವರೂರಿಗೆ ತೆರಳುವಂತೆ ಮತ್ತು ಸ್ವಾವಲಂಬಿಯಾಗಿ ಬಾಳುವಂತೆ ಹೇಳಿದರೂ ಆಕೆ ತನ್ನ ಹಟ ಬಿಡಲೊಲ್ಲಳು.

ಆರ್. ಇಂದಿರಾ

ಈಗ ಹೇಳಿ ಈ ಸಮಸ್ಯೆಗೆ ಪರಿಹಾರವೇನು? ಕೋರ್ಟ್ ಮೂಲಕ ಜೀವನಾಂಶ ಕೊಡಲು ಆತನೇನೂ ತಯಾರು, ಆದರೆ ಈಕೆ ಒಮ್ಮೆ ತಾಳಿ ಕಟ್ಟಿದ ಈ (ರಾಕ್ಷಸ) ಗಂಡನೊಂದಿಗೆ ಸಾಯುವವರೆಗೂ ಮಾನಸಿಕ ಮತ್ತು ದೈಹಿಕವಾಗಿ ಹಿಂಸೆಯನ್ನು ಅನುಭವಿಸುತ್ತಾ ಇರಲು ಸಿದ್ಧವಾಗಿರುವ ಸುಶೀಲಳಿಗೆ ಏನು ಹೇಳುವುದು?

ಇದು ಹೀಗಾದರೆ ಸರೋಜಳದು ಮತ್ತೊಂದು ಕತೆ, ಮದುವೆಯಾಗಿ ಎರಡು ಮಕ್ಕಳಾದ ನಂತರ,

22ನೇ ಪುಟ ನೋಡಿ

14ನೇ ಪುಟದಿಂದ

ನಾಯಕಿ ಮಾಯಾಳ ಸಂಕೀರ್ಣ ವ್ಯಕ್ತಿತ್ವವನ್ನು ಸಂಪೂರ್ಣವಾಗಿ ವಿಶ್ಲೇಷಿಸಿದ್ದಾರೆ. ಮೂಢನಂಬಿಕೆ, ತಂದೆಯ ಒತ್ತಡ, ಅತೀ ಆಕಾಂಕ್ಷೆ (ಲಿಬಿಡೋ) ಮಾನಸಿಕ ಅಸ್ತವ್ಯಸ್ತತೆ, ಬದುಕುವದಾಹ ಇವೆಲ್ಲ ಸೇರಿ ಅವಳಿಗೆ ಮನೋವಿಕಲ್ಪವುಂಟುಮಾಡಿದ್ದವು. ಅವಳು ತೀರ ಸಣ್ಣವಳಿದ್ದಾಗ ಅವಳ ಅಜ್ಜಿ ಅವಳ ಭವಿಷ್ಯ ಕೇಳಲು ಮಾಯಾಳನ್ನೂ ಕರೆದುಕೊಂಡು ಶಿವನ ದೇವಾಲಯಕ್ಕೆ ಹೋಗಿದ್ದಳು. ಕೆಂಪಾದ ಶಿವಲಿಂಗದ ವಿಗ್ರಹವನ್ನು ಅದರೆ ಬದಿಯಲ್ಲೆ ಅರ್ಚಕನೂ, ಒಡಕು ದನಿಯ ಏಕತಾನದ ಸ್ವರದಲ್ಲಿ ಆ ಅರ್ಚಕ ಹೇಳುತ್ತಿದ್ದ ಪ್ರೇಮ, ದಾಂಪತ್ಯ, ಸಾವು ಇವೆಲ್ಲ ಅವಳಿಗೆ ನವಿಲುಗಳ ಪ್ರಣಯಕೇಳಿಯಂತೇ ಸಾಂಕೇತಿಸಿದ್ದವು. ಇವುಗಳಿಂದ ಆಕೆ ಉದ್ರೇಕಗೊಂಡಿದ್ದಳಷ್ಟೇ ಅಲ್ಲದೆ ಹೆದರಿದ್ದಳೂ ಕೂಡ. ಮದುವೆಯಾದ ೫ ನೇ ವರ್ಷದಲ್ಲಿ ಮಾಯಾ ಅಥವ ಅವಳ ಪತಿ ಅಸ್ವಾಭಾವಿಕ ಮರಣ ಹೊಂದುವರೆಂದು ಆ ಅರ್ಚಕ ನುಡಿದಿದ್ದ. ವಿಲಕ್ಷಣವಾದ ನಲಿವಿನ ಕೇಕೆಯನ್ನು ಆ ಅರ್ಚಕ ಲೈಂಗಿಕತೆ ಮತ್ತು ಸಾವಿಗೆ ಸಂಬಂಧಿಸಿದ್ದೆಂದು ಹೇಳಿದ್ದಾಗಿ ತಿಳಿದ ಆಕೆಗೆ ಈ ವಿಲಕ್ಷಣ ಸಂಕೇತಗಳು ಮತ್ತು ಸಾವಿನಭಯ ಅವಳನ್ನು ಕಂಗೆಡಿಸಿ ಮತಿಭ್ರಮಣೆಗೆ ನಾಂದಿಯಾದವು. ಆಕೆ ವಿವಾಹವಾದ ೪ ನೇ ವರ್ಷದಲ್ಲಿ. ಅವಳ ಗಂಡನಿಗೆ ಈ ಭವಿಷ್ಯದ ಬಗ್ಗೆ ಅರಿವಿಲ್ಲದಿರುವುದರಿಂದಲೂ, ಹಾಗೂ ಬುದ್ಧಿಜೀವಿಯಾದುದರಿಂದ ಈಕೆ ಸ್ವಪ್ನದಲ್ಲಿ ನವಿಲುಗಳ ಕೇಕೆ ಕೇಳಿದಂತಾಗಿ ಭಯದಿಂದ ಪೀಡಿತಳಾದಾಗ ಅವನು ಅದನ್ನು ಎಲೆಕ್ಟ್ರಾ ಕಾಂಪ್ಲೆಕ್ಸೆಂದು ಆರೋಪಿಸುತ್ತಾನೆ. ಒಂದು ಕೆಟ್ಟ ಘಳಿಗೆಯಲ್ಲಿ ಸಂಪೂರ್ಣ ಹತೋಟಿ ತಪ್ಪಿದ ಅವಳಿಗೆ ತಾವು ಗಂಡ ಹೆಂಡತಿಯಲ್ಲೊಬ್ಬರು ಸಾಯಲೇಬೇಕು ಎಂಬ ಭಾವನೆ ತೀವ್ರವಾಗಿ ಕಾಡಿದಾಗ, ತನ್ನ ಗಂಡನನ್ನೇ ಕೊಲೆಮಾಡಿ ತಾನು ಆತ್ಮಹತ್ಯೆಮಾಡಿಕೊಳ್ಳುತ್ತಾಳೆ. ಈ ಕೃತಿ ಸಾಹಿತ್ಯದಲ್ಲೇ ವಿಶಿಷ್ಟವೆಂಬಂಥ ರಚನೆ, (ಅದರಲ್ಲಿ ಮಾಯಾ ಮತ್ತು ಅವಳ ಗಂಡನ ನಡುವೆ ಅಲ್ಲಲ್ಲಿ ನಡೆದ ಸಂಭಾಷಣೆಗಳೂ ಹರಡಿವೆ) ಅನಿತಾ ದೇಸಾಯಿಯವರ ಛಾಪು, ಮನಮುಟ್ಟುವ ನಿರೂಪಣೆ, ಕಾವ್ಯಾತ್ಮಕತೆ, ಸಂಕೇತಗಳು ಅತ್ಯುತ್ತಮವಾಗಿವೆ.

ಅಮೃತಾ ಪ್ರೀತಂ ಕವಯಿತ್ರಿಯಾಗಿ ಲೇಖನ ವ್ಯವಸಾಯಕ್ಕೆ ಕಾಲಿಟ್ಟದ್ದರೂ ಆಕೆ ಕಾದಂಬರಿ, ಸಣ್ಣ ಕತೆಗಳಲ್ಲಿ ತಮ್ಮತನ ಮೆರೆಸಿದ್ದಾರೆ. ಪ್ರಾರಂಭದ ಕಥೆಗಳ ಪಾತ್ರದ ರಚನೆಯಲ್ಲಿ ಆಕೆಯ ಗುಣಗಳೂ ಸೇರಲ್ಪಟ್ಟಿವೆ ಎನ್ನುತ್ತಾರೆ ಬಹುಜನ. ಆಕೆಯ ಪ್ರೌಢತೆ ಸತ್ಯ ಹಾಗೂ ಏಕತೆಗಳ ಹುಡುಕಾಟಕ್ಕೆ ಸೀಮಿತವಾಗುತ್ತವೆ. ಈಕೆ ಫ್ರೈಡ್‌ನಿಂದ ಪ್ರಭಾವಿತರಾಗಿದ್ದರು. ಇವರ ಕೃತಿಗಳಲ್ಲಿ ಬರುವ ಸೂಕ್ಷ್ಮ ಮನದ ಬಾಲಕಿಯರು ತಾಯಿಯ ನಿಸ್ವಾರ್ಥ ಪ್ರೇಮಕ್ಕೆ ಹಾತೊರೆಯುವಂತೆ ಚಿತ್ರಿತವಾಗಿದ್ದಾರೆ. ಆಕೆಯ "ದಿ ಘೋಸ್ಟ್" ಒಂದು ಸಣ್ಣ ಹುಡುಗಿಯಿಂದ ನಿರೂಪಿಸಲ್ಪಟ್ಟ ಕಥೆ. ಅವಳಿಗೆ ತಂದೆಗಿಂತ ತಾಯಿಯೇ ಹೆಚ್ಚು ಆಪ್ತಳಾಗಿದ್ದಳು, ಆದರೆ ಅವಳಿಗೆ ಬೇರೆಯವರ ಅಂದರೆ ವಿಶಿಷ್ಟವಾಗಿ ತಾಯಿಯ ಸಂಬಂಧಿಕರೂ ತನ್ನನ್ನು ಪ್ರೀತಿಸಬೇಕೆಂಬ ಅಪೇಕ್ಷೆ. ಅವಳ ಅಜ್ಜಿ ಅವಳನ್ನು ದೂರಮಾಡಿದ್ದುದರಿಂದ ಅವಳು ತೀವ್ರ ನೋವುಂಡಿದ್ದಳು. ಇದ್ದಕ್ಕಿದ್ದಂತೆ ಅವಳಿಗೆ ಒಂದು ದಿನ ತಾನು ತಾಯಿ ಎಂದು ತಿಳಿದುಕೊಂಡಿರುವಾಕೆ ತನ್ನನ್ನು ಹೆತ್ತ ತಾಯಿ ಅಲ್ಲ, ಸಾಕುತಾಯಿ ತಮ್ಮ ಮನೆಯ ಹಿಂದೆ ವಾಸವಾಗಿರುವ ಸದಾ ಒಂಟಿಯಾಗಿ, ದುಃಖಿಯಾಗಿರುವ ಪ್ರೀತಿಯ "ಆಂಟಿ" ತನ್ನ ತಾಯಿ ಎಂಬ ಸತ್ಯ ಅವಳೆದುರಿಗೆ ಬಂದಾಗ ಅವಳಿಗೆ ನಂಬಲಾಗದಂಥ ಸ್ಥಿತಿ. ಸತ್ಯ ತಿಳಿದಾಕ್ಷಣ ನಡುಗಿದ್ದಳು. ಅನುಮಾನದಿಂದ ಕಡೆಗೆ ಮಾನಸಿಕ ಆಘಾತ ದೈಹಿಕ ಆರೋಗ್ಯದ ಮೇಲೂ ಪರಿಣಾಮ ಬೀರಿದ್ದರಿಂದ ಮಲಗೇ ಬಿಟ್ಟಳು. ಕಡೆಯಲ್ಲಿ ಚೇತರಿಸಿಕೊಂಡರೂ ಆಕೆ ಆ ವೇಳೆಗೆ ಇಬ್ಬರು ತಾಯಂದಿರನ್ನೂ ಕಳೆದುಕೊಂಡಿದ್ದಳು.

ಆ ಪುಟ್ಟ ಬಾಲಕಿ ಅನುಭವಿಸಿದ ನೋವು, ದುಃಖ, ಅನಾಥ ಪ್ರಜ್ಞೆ, ಭಾವನಾತ್ಮಕ ಸಂದರ್ಭಗಳಲ್ಲಿ ಆಕೆ ನಡೆದುಕೊಂಡ ರೀತಿ ಇವೆಲ್ಲ ಆತ್ಮಚರಿತ್ರೆಯ ದನಿಯಲ್ಲಿ ನಿರೂಪಿಸಲ್ಪಟ್ಟಿವೆ. ಅಮೃತಾ ಪ್ರೀತಂ ಹನ್ನೊಂದು ವರ್ಷದವಳಾಗಿದ್ದಾಗ ತಾಯಿಯನ್ನು ಕಳೆದುಕೊಂಡಿದ್ದವರು, ತಂದೆಯ ಪ್ರೋತ್ಸಾಹದಿಂದ ಕವನ ಬರೆಯಲು ಪ್ರಾರಂಭಿಸಿದ್ದರು. ಒಂದು ರೀತಿಯಲ್ಲಿ ಪ್ರೀತಂ ಆಧುನಿಕ ಪ್ರಗತಿಪರ ಮಹಿಳೆಯನ್ನು ಪ್ರತಿನಿಧಿಸುತ್ತಾರೆನ್ನಬಹುದು. ಆಕೆ ಜೀವನ ನೋಡುವ ವಿಧಾನ — ಪಂಜಾಬಿನ ರಾಜಕೀಯ ವಿಭ

ಜನೆಯಿಂದ ಉಂಟಾದ ಗೊಂದಲ, ಕ್ರೌರ್ಯಗಳಿಂದ ಬೇರೆ ಮುಖವನ್ನು ಪಡೆದಿತ್ತು. ಡೆಲ್ಲಿಯಲ್ಲಿ ವಾಸಿಸತೊಡಗಿದ ಮೇಲೆ ಆಕೆ ಆಧುನಿಕತೆಯೆಡೆಗೆ ಆಕರ್ಷಿತರಾಗಿದ್ದರೆನ್ನಬಹುದು. ಇವೆಲ್ಲ ಅವರ ಮೇಲೆ ಬೀರಿದ ಪರಿಣಾಮಗಳನ್ನು ಆಕೆಯ ಆತ್ಮಚರಿತ್ರೆಯಲ್ಲಿ ಕಾಣಬಹುದು.

ಈ ಎಲ್ಲ ಅಂಶಗಳಿಂದ ಸಮಕಾಲೀನ ಲೇಖಕಿಯರ ಕಲ್ಪನೆಯನ್ನು ಮಾಡಿಕೊಳ್ಳಬಹುದು. ಪ್ರತಿ ಕಥೆಯ ಹಿಂದೆ ಒಬ್ಬ ಕತೆಗಾರ, ಆ ಕತೆಗಾರನ ಹಿಂದೆ ಸಮಾಜವಿರುತ್ತದೆ ಎಂಬ ಮಾತೊಂದಿದೆ. ಇದೇ ಮಾತಿನಿಂದ ಆಧರಿಸಿ ದ. ಏಷ್ಯಾದ ಲೇಖಕಿಯರ ಮನಸ್ಥಿತಿಯನ್ನು ಅಳೆಯಬಹುದೆ? ಎಲ್ಲರ ಕುರಿತು ಅಲ್ಲದಿದ್ದರೂ, ಕೆಲವು ಮಂದಿ ಪ್ರಗತಿಪರ ಲೇಖಕಿಯಥ ಬಗ್ಗೆ ಚರ್ಚಿಸಬಹುದೇನೊ. ಆಶಾಪೂರ್ಣಾದೇವಿಯರನ್ನೇ ಉದಾಹರಣೆಗೆ ತೆಗೆದುಕೊಂಡರೆ — ಮಧ್ಯಮವರ್ಗಕ್ಕೆ ಸೇರಿದ, ಉನ್ನತ ವಿದ್ಯಾವಂತ ಹಾಗೂ ಮೇಲ್ವರ್ಗ ಅಥವಾ ಮುಂದುವರೆದ ಜಾತಿಯಿಂದ ಬಂದ ಸಮಕಾಲೀನ ಲೇಖಕಿಯರಂತೆ ಈಕೆಯೂ ಬಂದವರು. ಈ ಎಲ್ಲ ಮಹಿಳೆಯರೂ (ಲೇಖಕಿಯರು) ವಿಶ್ವದ ಬದಲಾದ ರೀತಿ ನೀತಿಗಳಿಗೆ ಸ್ಪಂದಿಸಿದವರು ಅಷ್ಟೇ ಅಲ್ಲ, ತಮ್ಮ ಸಂವೇದನೆಗಳೂ ಈ ಬದಲಾವಣೆಗಳ ಫಲಶೃತಿ ಎಂದರಿತವರು.
ನಾಗರಿಕ ಸಮಾಜ ಹರಿವ ಪ್ರವಾಹದಂತಿದ್ದು ಹೊಸತೆಂದು ಪ್ರತಿಪಾದಿಸಲ್ಪಡುವ ಮೌಲ್ಯಗಳು, ಪ್ರಗತಿ ಧೋರಣೆಗಳು ಕೊಚ್ಚಿ ಹೋಗದೆ ಉಳಿಯಬೇಕಾದರೆ ಎಷ್ಟು ತ್ರಾಸದಾಯಕ ಎಂಬುದು ಅವರಿಗೆ ತಿಳಿಯದುದೇನಲ್ಲ. ಉಳಿದ ಪ್ರಖ್ಯಾತ ಪುರುಷ ಲೇಖಕರ ಸಾಲಿನಲ್ಲಿ ನಿಲ್ಲಬೇಕಾದ ಈ ಲೇಖಕಿಯರು ನಾಳಿನ ಪ್ರಪಂಚ ಕಾಣಬಹುದಾದ ರೂಪುರೇಷೆಗಳನ್ನು, ತಾವು ಅನುಭವಿಸಿದ ಸಂಕಷ್ಟಗಳ ಹಿನ್ನೆಲೆಯಲ್ಲಿ ಹಾಗೂ ಸತತ ಒದಲಾವಣೆ ಹೊಂದುತ್ತಿರುವ ದ. ಏಷ್ಯಾದ ಸಮಾಜಗಳ ಪ್ರಭಾವದ ನೆರಳಿನಲ್ಲಿ ಲಕ್ಷಿಸಿಕೊಳ್ಳಬೇಕಿತ್ತು, ತಮ್ಮ ಕೃತಿಗಳಲ್ಲಿ ಅವುಗಳನ್ನೇ ಚಿತ್ರಿಸಬೇಕಾಗಿತ್ತು. ಈ ನಿಟ್ಟಿನಲ್ಲಿ ಬಹಳ ಜನ ಲೇಖಕಿಯರು ಯಶಸ್ವಿಗಳೂ ಆದರೆನ್ನಬಹುದು.

# ಸ್ತ್ರೀ ಬಾವುಟ

ಮೆರವಣಿಗೆಯ ಮುಂದೆ ಮಹಿಳಾ ಸಂಘದ
ಧ್ಯಕ್ಷೆ; ಒಂದು ಬಾವುಟ
ಹಿಂದೆ ಸಾಲು–ಸಾಲು
ಶರೀರಗಳಿಲ್ಲದ ತಲೆಗಳು
ಮುಂದಿನವಳ ಸ್ಲೋಗನ್ನಿಗೆ
ಇವರ ಅರ್ಥವಾಗದ ಕಿರುಚು
" ಹೆಂಗಸೇ ಎದ್ದೇಳು
ಶೋಷಣೆಗೆ ಬಂಡೇಳು "

ಮೆರವಣಿಗೆ ಸಾಗಿತ್ತು ಚಿತ್ರಮಂದಿರದೆದುರು
ಅಶ್ಲೀಲ ಭಿತ್ತಿ ಚಿತ್ರಕ್ಕೆ ಸೆಗಣಿ ಎರಚಿದ
ಇವರು
ಚೀರಿದರು.
" ಬಿಚ್ಚಿರುವ ಚಿತ್ರರಂಗ
ವ ಪ್ರೋತ್ಸಾಹಿಸುವ ರಾಜಕೀಯರಂಗ
ನಾಶವಾಗಲಿ ಎಲ್ಲ
ಇಲ್ಲದಿರೆ ನಾವು ಸುಮ್ಮನಿರಲ್ಲ"

ಬೋಳು ಬೋಳಾದ ಮರದಡಿಯಲ್ಲಿ
ನಿಂತು ನೋಡಿದಾಕೆಯ ಗಂಟಲಲ್ಲಿ
ಹಾಡಾಗಲಿಲ್ಲ
ಸಿಲುಕಿಕೊಂಡು ಮಾತುಗಳು
" ಬಟ್ಟೆಯೇ ಇಲ್ಲ ಮುಚ್ಚಿ
ಕೊಳ್ಳುವುದೆಲ್ಲಿಂದ?
ಎಲ್ಲಿಂದಲೋ ಬಂದವರು
ಹರಿದು ಹೋಗುವರು ಇದ್ದದ್ದನ್ನ".

ಜೀಪಿಂದ ಇಳಿದು ಬಂದ ಪೋಲಿಸು
ಮೀಸೆ ತಿರುವಿದ
ಗಲಾಟೆ ಮಾಡಿದರೆ ಲಾಠಿಛಾರ್ಜೆಂದ
ಗಂಟಲೆಲ್ಲವೂ ಸ್ಥಬ್ಧವಾದುದಕ್ಕೆ
ಬಾವುಟ ಬಾಗಿತು
ಮೌನವೊಂದು ಚರಮಗೀತೆ

ಆಶಾಗೌರಿ ಕೆ. ಎಸ್.

# ನೆಲೆ ಕಂಡ ಬದುಕು

ವೇದ

ಈಕೆಗೆ ವಯಸ್ಸು ಮೂವತ್ತಾರು. ಜೀವನದ ಕಹಿಯನ್ನೇ ಸಿಹಿಯಾಗಿಸಿಕೊಂಡು ಬದುಕನ್ನು ಹಸನು ಮಾಡಿಕೊಂಡವರು. ಐದು ಮಂದಿ ಅಕ್ಕ–ತಂಗಿಯರ ಜೊತೆ ಹುಟ್ಟಿ ಬೆಳೆದ ಈಕೆ ೭ನೆಯ ತರಗತಿಯಲ್ಲಿ ಸ್ಕೂಲಲ್ಲಿ ಮೊದಲನೆಯ ರ್ಯಾಂಕ್ ಪಡೆದವರು. ಆದಾಗ್ಯೂ ಹಳೆಯ ಕಾಲದ ತಂದೆ — ತಾಯಿಗಳು ಅಲ್ಲಿಗೇ ಓದು ನಿಲ್ಲಿಸಿದರು. ಅವರ ಸಂಪ್ರದಾಯದ ಮುಂದೆ ಆಕೆಯ ಅಳು-ಹಠ ಏನೂ ನಡೆಯಲಿಲ್ಲ, ೭ನೆಯ ತರಗತಿ ಓದಿಗೇ ಆಕೆ ತಿಲಾಂಜಲಿಯನ್ನಿಕ್ಕಬೇಕಾಯಿತು,

೧೮ ವರ್ಷಕ್ಕೆಲ್ಲ ಈಕೆಗೆ ಮದುವೆ. ಮದುವೆಯ ಸುಖ ಸಂಭ್ರಮಗಳೆಲ್ಲ ಏಳು ತಿಂಗಳಿಗೇ ಸಮಾಧಿಯಾಗಿದ್ದವು. ಮದುವೆಯಾದ ಮೂರು ತಿಂಗಳೇ ಗರ್ಭಿಣಿಯಾದ ಈಕೆ ಏಳು ತಿಂಗಳಿಗೇ ಒಂದು ಗಂಡು ಮಗುವಿಗೆ ತಾಯಿಯಾದರು. ಇಷ್ಟೇ ಕಾರಣವಾಯಿತು ಕುಡುಕ ಗಂಡನಿಗೆ. ಕಾಮಾಂಧನಾದ ಕ್ರೂರಿ ಗಂಡ ಗಂಡಾಂತರಿಯಾಗಿ ಆಕೆಗೆ ಹಿಂಸೆ ಕೊಡತೊಡಗಿದ. ಆ ಮಗು ತನ್ನದಲ್ಲ, ಆಕೆ ಮುಂಚೆಯೇ ಬಸುರಿಯಾಗಿದ್ದಳು ಇತ್ಯಾದಿಯಾಗಿ ಆಕೆಗೆ ಅವಮಾನ ಮಾಡುತ್ತಾ ಬೆಂಬತ್ತಿದ ಭೂತವಾದ. ಆರಂಭದಿಂದಲೂ ಆತನ ಕಿರುಕುಳ ಸಹಿಸಿಕೊಳ್ಳುತ್ತಾ ಬಂದಿದ್ದ ಆಕೆಗೆ ಈ ಆರೋಪ ಸಹಿಸಲಾಗಲಿಲ್ಲ. ಆಕೆಯ ಸ್ವಾಭಿಮಾನವನ್ನೆ ಕೆಣಕಿದಂತಾಗಿತ್ತು. ಆತ ಆಸ್ಪತ್ರೆಗೆ ಬಂದು, "ನನ್ನ ಮನೆಗೆ ಈ ಮಗುವನ್ನು ತೆಗೆದುಕೊಂಡು ಬರಕೂಡದು. ಬಂದರೆ ತಾಯಿ ಮಗುವನ್ನು ಹಿಂದಿರುಗದ ಯಾತ್ರೆಗೆ ಕಳುಹಿಸಬೇಕಾಗುತ್ತದೆ" ಎಂದ. ಮುಂಚೆಯೇ ನೊಂದಿದ್ದ ಆಕೆಯ ಹೃದಯ ಕುದಿದು ಚೀರಿತು. ಇಷ್ಟು ಅನುಮಾನವಿರುವ ಆ ಪಾಪಿಯ ನೆರಳಲ್ಲಿ ತನ್ನ ಕಂದನನ್ನು ಬೆಳೆಸಬಾರದು. ಕೂಲಿನಾಲಿಯಾದರೂ ಮಾಡಿ ತನ್ನ ಮಗುವನ್ನು ತಾನು ಕಾಪಾಡಿಕೊಳ್ಳಬೇಕೆಂದು ಆಕೆ ನಿರ್ಧರಿಸಿದರು. ೭ ತಿಂಗಳಿಗೇ ತಾಯಿಯಾಗಿ ಬಾಣಂತನಕ್ಕೆ ತವರಿಗೆ ಬಂದ ಈಕೆ ಮತ್ತು ಗಂಡನ ಮುಖ ನೋಡಲೇ ಇಲ್ಲ. ಧೈರ್ಯದಿಂದ ಎಸ್. ಎಸ್. ಎಲ್. ಸಿ. ಮುಗಿಸಿ ಟೈಪಿಂಗ್ ಮಾಡಿಕೊಂಡರು. ಸೋದರಿಯ ಸಂಬಂಧಿಕರಿಂದ ಒಳ್ಳೆಯ ಕಾರ್ಖಾನೆಯಲ್ಲಿ ಕೆಲಸ ಪಡೆದರು. ಆಕೆಯ ಏಳ್ಗೆಯನ್ನು ಸಹಿಸದ ದುಷ್ಟ ಗಂಡ ಕಾರ್ಖಾನೆಗೂ ಬಂದು ಆಕೆಯ ಮೇಲೆ ಇಲ್ಲ ಸಲ್ಲದ ವ್ಯಭಿಚಾರದ ಅಪವಾದ ಹೊರಿಸಿದ. ಆತನ ಕಾಟದಿಂದ ರೋಸಿಹೋದ ಆಕೆ ಮತ್ತು ಆಕೆಯ ತಂದೆ–ತಾಯಂದಿರು ಆತನಿಂದ ವಿಚ್ಛೇದನ ಬಯಸಿದರು. ವಿಚ್ಛೇದನ ಪಡೆದ ಮೇಲೆ ಮತ್ತೇ ಕಾರ್ಖಾನೆಗೆ ಹೋಗಲು ಅಸಹ್ಯವಾಗಿ ಕಾರ್ಖಾನೆಗೆ ರಾಜೀನಾಮೆ ಕೊಟ್ಟರು. ಇದನ್ನು ತಿಳಿದ ಆತ ಆಕೆ ಎಲ್ಲಿ ಹೋದರೂ ಬದುಕಲು ಬಿಡುವುದಿಲ್ಲ ಎಂದು ಪತ್ರ ಬರೆದು ಹೆದರಿಸತೊಡಗಿದ. ಆದರೆ ಇದ್ಯಾವುದನ್ನೂ ಸಹ ಗಮನಕ್ಕೆ ತಂದುಕೊಳ್ಳದೆ ಆಕೆ ಸೀರೆಗಳನ್ನು ತಂದು ಮಾರುವುದು, ಫಾಲ್ಸ್ ಹೊಲೆಯುವುದು, ಇನ್ನು ಸಣ್ಣ-ಪುಟ್ಟ ಬೇರೆ ಬೇರೆ ವ್ಯವಹಾರಗಳನ್ನು ಮಾಡತೊಡಗಿದರು. ಇದನ್ನು ಕೆಡಿಸಲು ಆತನಿಂದ ಸಾಧ್ಯವಾಗಲಿಲ್ಲ. ನ್ಯಾಯಕ್ಕೆ ಬೆಲೆಯುಂಟು, ಕಷ್ಟಕ್ಕೆ ಫಲವುಂಟು ಎಂಬಂತೆ ಆಕೆಯ ವ್ಯವಹಾರ ವೃದ್ಧಿಯಾಗಿ ಈಗ ಆಕೆ ತನ್ನ ಮಗನಿಗೆ ಒಳ್ಳೆಯ ವಿದ್ಯಾಭ್ಯಾಸ ಮಾಡಿಸಿರುವರು. ತನ್ನ ಕಾಲ ಮೇಲೆ ತಾನು ನಿಂತು, ಇನ್ನೊಬ್ಬರ ಹಂಗಿಗೆ ಕಾಯದೇ ಬೇರೆಯವರಿಗೆ ಸಹಾಯ ಮಾಡುವಷ್ಟು ಅನುಕೂಲ ಸ್ಥಿತಿಯಲ್ಲಿ ಇದ್ದಾರೆ. ಈಕೆ ಒಂದು ದಿನವಾದರೂ ತನಗೆ ಗಂಡನಿಲ್ಲ ಎಂದಾಗಲೀ, ಗಂಡ ಬಿಟ್ಟವಳು ತಾನು ಎಂದಾಗಲೀ ದುಃಖಿಸುತ್ತಾ ಕೂತವರಲ್ಲ, ಜೀವನದ ಪ್ರವಾಹದೆದುರು ಈಜಿ ದಡ ಸೇರಿದವರು,

---

19ನೇ ಪುಟದಿಂದ

ಬಲವಂತವಾಗಿ ಸರೋಜಳಿಂದ ಖಾಲಿ ಕಾಗದದಲ್ಲಿ ಸಹಿ ಪಡೆದು ಮದುವೆಯಾಗಿ ಸರೋಜಳಿಗೆ ಜೀವನಾಂಶವನ್ನೂ ಕೊಡದೆ ಸುಖ ಜೀವನ ನಡೆಸುತ್ತಿರುವ ರಾಕ್ಷಸ ಗಂಡ ಮತ್ತೊಂದು ಕಡೆ. ಹೀಗೆ ಸಮಾಜದಲ್ಲಿ ಇಂಥಹ ಗಂಡಸರ ರಾಕ್ಷಸ ಕೃತ್ಯಕ್ಕೆ, ಶೋಷಣೆಗೆ ಒಳಗಾಗುತ್ತಿರುವ ಹೆಣ್ಣು ಮಕ್ಕಳೆಷ್ಟು ಮಂದಿಯೋ? ಸರ್ಕಾರ ಈ ಬಗ್ಗೆ ಏನು ಕ್ರಮ ಕೈಗೊಂಡಿದೆ. ಈ ಅಭಾಗಿನಿಯರ ಕಣ್ಣೀರು ಒರೆಸುವವರ್ಯಾರು?

# ಅಗ್ನಿಸಾಕ್ಷಿ

ಲೇ: ಶ್ರೀರಂಗ
ಪ್ರ: ನೇತ್ರ ಪ್ರಿಂಟರ್ಸ್

ಇನ್ನು ಮುಂದೆ ಬರುವ ದೃಶ್ಯವು ಸಂಸ್ಕೃತ ನಾಟಕದ ಪ್ರವೇಶಕದಂತೆ ಕತೆಯ ಹಿಂದಿನ ಮತ್ತು ಮುಂದಿನ ಭಾಗಗಳನ್ನು ಕೂಡಿಸುವುದು ಮಾತ್ರ. ಆದುದರಿಂದ ಮೂಲದ ವಾತಾವರಣಕ್ಕೆ ಭಂಗ ತಾರದಂತೆ ಮೇಲಿನ ಕೊನೆಯ ಎರಡು ವಾಕ್ಯಗಳಲ್ಲಿಯ ಅವಸರದ ವೇಗವೆ ಇಲ್ಲಿಯೂ ಇರಬೇಕು. ಈ ದ್ರುತಗತಿ. ಇಡೀ ದೃಶ್ಯದ ಕೊನೆಗೆ ಬರುವ 'ನನ್ನ ಸೊಸೆ' ಯಾರಾದ್ರೂ ಉಳಿಸಿರಿ ನನ್ನ ಸೊಸೇನ್ನ. ಎಂದು ತಂಗಿಯು ಕೂಗುವುದಕ್ಕೆ ಮುಗಿಯಬೇಕು. ಹಾಗೆ ಮುಗಿದ ಮೇಲೆ ನಾಟಕವೆ ಮುಗಿಯಿತೇನೂ ಎಂದು ಪ್ರೇಕ್ಷಕರಿಗೆ ಭ್ರಮೆಯಾಗುವಂತೆ ಶಾಂತತೆ ನೆಲಸಬೇಕು. ಆಮೇಲೆ ಕತ್ತಲೆಯಲ್ಲಿಯೆ ಅಂಬುಲೈನ್ಸ್‌ನ ಗಂಟೆಯನ್ನು ಸ್ಪಷ್ಟವಾಗಿ ಕೇಳಿಸಿ ಈ ಅಂಕದ 2 ನೆಯ ದೃಶ್ಯವನ್ನು ಪ್ರಾರಂಭಿಸಬೇಕು.

(ಈಗ ರಂಗಸ್ಥಳದಲ್ಲಿ, ಪ್ರೇಕ್ಷಕರ ಬಲ ಅರ್ಧ ಭಾಗದಲ್ಲಿ ಮಾತ್ರ ಕ್ರಮೇಣ ಬೆಳಕು ಮೂಡುವುದು. ಅದಕ್ಕೆ ಮುಂಚಿತ ರಂಗದ ಹಿಂಬದಿಯ ತುಸು ದೂರದಿಂದ ಹತ್ತಿರ ಬರುವಂತೆ 'ಅಕ್ಕಾ, ಅಕ್ಕಾ ತಡೀ ತಡೀ' ಎಂದು ಸೋದರಮಾವನ ಕೂಗು ಕೇಳುವುದು. ಬೆಳಕಿನೊಡನೆ ತಾಯಿ ನಾಟಕದ ಪ್ರಾರಂಭದಲ್ಲಿದ್ದ ಹಿಂದಿನ ಬಾಗಿಲಿನಿಂದ ಬಂದು, ಪ್ರೇಕ್ಷಕರ ಬಲಬದಿಯ ಮುಂತುದಿಯತ್ತ ಅವಸರದ ಹೆಜ್ಜೆಗಳನ್ನಿಡುವಳು. ಮುಖದಲ್ಲಿ ಗಾಬರಿಯ ಕಳೆ, ಸೆರಗಿನಿಂದ ಬೆವರನ್ನು ಒರೆಸಿಕೊಳ್ಳುತ್ತಿದ್ದಾಳೆ, ಕಾಲ್ಗಳಲ್ಲಿ ಚಪ್ಪಲಿ, ಕೈಯಲ್ಲಿ ಕೊಡೆ, ಹೆಗಲ ಮೇಲೆ ಒಂದು ಚಿಕ್ಕ ಶಾಲು ಇದೆ. ಅಷ್ಟರಲ್ಲಿಯೆ ಹಿಂದಿನಿಂದ 'ಅಕ್ಕಾ, ಅಕ್ಕಾ ತಡೀ' ಎನ್ನುತ್ತ ಸೋದರಮಾವ ಧಾವಿಸಿ ಬರುವನು. ಬಂದವನೆ ಓಡುತ್ತಿದ್ದು ಏದುತ್ತ 'ಇದೇನ್ಮಾಡ್ತೀ, ಅಕ್ಕಾ, ತಡೆ' ಎನ್ನುತ್ತ ಅವಳ ಇದಿರು ಬಂದು ಕೈಗಳನ್ನು ಚಾಚಿ ಅಡ್ಡಗಟ್ಟಿ ನಿಲ್ಲುವನು. ಆಕೆ ಅವನನ್ನು ದಾಟಲು ಒಂದೆರಡು ಸಲ ಯತ್ನಿಸಿ, ವಿಫಲಳಾಗಿ)

ತಾಯಿ: (ಕಳಕಳಿಯ ದನಿಯನ್ನು ಎತ್ತರಿಸಿ, ಕನಲಿದವಳಾಗಿ) ಸರಿ ನೀ. ನನಗ ಹಾದಿ ಬಿಡು ನಾ ಹೋಗಲೇಬೇಕು.

ಸೋದರಮಾವ: (ಉಸಿರನ್ನು ಸಾವರಿಸಿಕೊಂಡು) ಎಲ್ಲಿ ಹೋಗ್ತೀ? ಯಾಕ ಹೋಗ್ತಿ? ನಾ ಹೇಳಿನಲ್ಲ?

ತಾಯಿ: ಏನ್ ಹೇಳಿದಿ ನೀನು? ಮಗಳ್ನ ಕರೆದ್ಕೊಂಡು ಬಾ ಅಂದ್ರೆ ಆಕೇನ್ನ ಅಲ್ಲಿಯೆ ಬಿಟ್ಟು ಬಂದಿ, ಸಾಯಲಿಕ್ಕೆ ಅಂತ ನಾ ಹೊರಟರ ನನ್ನ ಅಡ್ಡಗಟ್ಟೀ. ಬಿಡು ನನಗ ಹಾದೀನ್ನ, ನೀವೆಲ್ಲರೂ ಕೂಡಿ ನನ್ನ ಮಗಳ್ನ ಕೊಲ್ಲಬೇಕಂತೀರಿ. (ವೇದನೆ ಮತ್ತು ಕೋಪ ತಡೆಯದೆ ಮೈ ನಡುಗುತ್ತಿರುವಾಗ) ಸರಿ. (ಆಕ್ರೋಶದಿಂದ ಕೂಗುವಳು)

ಸೋದರಮಾವ: (ತಡೆಯದ ಆವೇಶದ ಭರದಲ್ಲಿ ಆಕೆ ನೆಲಕ್ಕೆ ಉರುಳುವಳೇನೊ ಎಂದೆನ್ನಿಸಿ ತಟ್ಟನೆ ಅವಳ ಎರಡೂ ಭುಜಗಳನ್ನು ಗಟ್ಟಿಯಾಗಿ ಹಿಡಿದು) ಅಕ್ಕಾ, ಇಲ್ಲದ ಕಲ್ಪನೆ ಮಾಡಬ್ಯಾಡ. ಒಳಗ ನಡೀ, ಮನೀ ಹೊರಗ ಬ್ಯಾಡ. ನಾ ಹೇಳ್ತೇನಿ ನಡೀ (ಎಂದು ಆಕೆಯನ್ನು ಹಿಂದಕ್ಕೆ ಒಯ್ಯಲೆತ್ನಿಸುವನು. ಆಕೆ ಮೈ ಬಿರುಸು ಮಾಡಿ ಗಟ್ಟಿಯಾಗಿ ನಿಂತಲ್ಲಿಯೇ ನಿಲ್ಲುವಳು) ಅಕ್ಕಾ.

ತಾಯಿ: (ದೂರದಲ್ಲಿ ಏನನ್ನೊ ನೋಡುವಂತೆ, ಇದಿರ ನಿಟ್ಟಿಸಿ) ಅಕ್ಕಾ; ಅಲ್ಲಿ; ನನ್ನ ಸರಸೂ ಕೂಗ್ತಾ ಇದ್ದಾಳೆ. ಬಂದೆ, ಮಗೂ, ಬಂದೆ. (ಎಂದು ಮುಂದೆ ಹೆಜ್ಜೆಯನ್ನಿಡಬೇಕೆನ್ನುವಾಗ ಅವನು ತುಸು ಬಲವಾಗಿಯೇ ಅವಳನ್ನು ಹಿಡಿದು ನಿಲ್ಲಿಸುವನು)

ಸೋದರಮಾವ: ಅದು ನಿನ್ನ ಭ್ರಾಂತಿ, ಅಕ್ಕಾ ನಿನ್ನ.

ತಾಯಿ: (ನಡುವೆಯೇ ಅವನನ್ನು ಎದುರಿಸಿ) ಭ್ರಾಂತಿ ಅಲ್ಲ. (ಎದೆಗೆ ಕೈ ಹಚ್ಚಿಕೊಂಡು) ಇಲ್ಲಿ ಒಳಗ ಏನೊ ಹುರುಹುರು ಆನಿಸ್ತಾ ಇದೆ. ತಾಯಿ ಕರುಳಿಗೆ ತಿಳೀತದ. ಅಯ್ಯೋ ಅಯ್ಯೋ ಸರಸೂ–(ಎಂದು ಬಿಕ್ಕಿಗಾಗಿ ತಡೆಯುವಳು ಆವೇಶ ಇಳಿಯುವುದು,)

ಸೋದರಮಾವ: (ಸಮಾಧಾನದ ದನಿಯಲ್ಲಿ) ಹಂ ಹೀಂಗ; ಕಣ್ಣೀರ ಸುರಿಸು ಮನಸ್ಸು ಹಗುರಾಗ್ತದ. (ಬೆನ್ನ ಮೇಲೆ ಎಡಗೈಯನ್ನಾಡಿಸುತ್ತ ಮೆಲ್ಲನೆ ಅವಳನ್ನ ತಿರುಗಿಸಿ ತನಗೆ ಇದಿರಾಗಿ ನಿಲ್ಲಿಸುವನು. ಈಗ ಇಬ್ಬರೂ ಪ್ರೇಕ್ಷಕರಿಗೆ ಮಗ್ಗುಲಾಗಿ ನಿಂತಿದ್ದಾರೆ.)

ತಾಯಿ: (ಮತ್ತೆ ಚಡಪಡಿಸುತ್ತ) ಇಲ್ಲಿ ಬಿಡು ನನ್ನ, ನಾ ಹೋಗ್ತೇನಿ. ಕರೆದ್ಕೊಂಡು ಬರ್ತೇನಿ ನನ್ನ ಸರಸೂನ್ನ.

ಸೋದರಮಾವ: (ದನಿಯಲ್ಲಿ ತುಸು ಹಟ) ಅವರೇ ಹೇಳಿದರಲ್ಲ, ಕಳಿಸ್ತೇವಿ ಅಂತ?

ತಾಯಿ: ಅವರ ಮ್ಯಾಲೆ ನನ್ನ ವಿಶ್ವಾಸ ಇಲ್ಲ.

ಸೋದರಮಾವ: ನಾನೇ ಹೋಗಿ ಕರೆದ್ಕೊಂಡು ಬರ್ತೇನಿ. ನನ್ನ ಮ್ಯಾಲಾದ್ರೂ ವಿಶ್ವಾಸ ಅದೇನೂ ಇಲ್ಲೊ.

ತಾಯಿ: ನೀ ಹೋದರೆ ಅವರು ಕಳಿಸೋದಿಲ್ಲ.

ಸೋದರಮಾವ: ಕಳುಹಿಸ್ದೇ ಏನ್ಮಾಡಾರ? ಹತ್ತು ಸಾವಿರ ಆಶಾಕ್ಕ ಕಳಿಸಿಯೇ ಕಳಿಸ್ತಾರೆ.

ಹೆಣ್ಣು ಶಿಶುವಿನ ವರ್ಷದ ನೆನಪಿಗಾಗಿ ..........

# ಬಾಲೆಯರು, ಕಲೆ ಮತ್ತು ಕಲಾಸಕ್ತಿ

ರುಕ್ಮಿಣಿ ಅರುಂಡೇಲ್ ಬಹು ಸಂಪ್ರದಾಯಸ್ಥ ಮನೆತನದಿಂದ ಬಂದವರು. ಆದರೂ ಆಕೆ ಎಲ್ಲರ ಟೀಕೆ, ಟಿಪ್ಪಣಿಗಳನ್ನೆದುರಿಸಿಯೂ ನೃತ್ಯ ಕಲಿತರು. ಅವರಿಂದಾಗ ನೃತ್ಯದಲ್ಲಿ ಸಂಪ್ರದಾಯಸ್ಥ ಮನೆತನದವರೂ ಪಾಲ್ಗೊಳ್ಳಬಹುದು ಎಂಬ ಭಾವನೆ ಹುಟ್ಟಿತು ಎಂಬುದರಲ್ಲಿ ಸಂದೇಹವಿಲ್ಲ. ಈ ಮೊದಲು ನೃತ್ಯ ದೇವದಾಸಿಯರಿಗೆ, ಹಾಗೂ ಶ್ರೀಮಂತರ ದೊಡ್ಡಸ್ತಿಕೆಯ ಪ್ರದರ್ಶನಕ್ಕೆ ಮಾತ್ರವೇ ಎಂಬಂತಹ ಪರಿಸ್ಥಿತಿ. ಸಂಗೀತವೂ ಸಹ ನೃತ್ಯದಷ್ಟಲ್ಲದಿದ್ದರೂ ಸ್ತ್ರೀಯರಿಗೆ ದೂರವೆ. ಇಂದು ಪರಿಸ್ಥಿತಿ ಹೆಚ್ಚೇನೂ ಸುಧಾರಿಸಿಲ್ಲ, ತಮಿಳುನಾಡಿನಲ್ಲಿ ಬಿಟ್ಟು. ಹಳ್ಳಿಗಳಲ್ಲಂತೂ "ಕಲಾಸಕ್ತಿ" ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುವುದಿಲ್ಲ. ಚಿತ್ರಕಲೆಗಳಂತೂ ಶ್ರೀಮಂತರಿಗೇ ಮೀಸಲು, ಕಾರಣ ಅವುಗಳಿಗೆ ಬೇಕಾಗುವ ದುಬಾರಿ ಹಣ. ಹಳ್ಳಿಗಳಲ್ಲಿ ಈ ಬಗ್ಗೆ ಒಲವೂ ಕಡಿಮೆ. ಜೊತೆಗೆ ಚಿತ್ರಕಲಾ ಶಾಲೆಗಳು, ಕಲಾಕೇಂದ್ರಗಳು ನಗರಗಳಲ್ಲೇ ಇರುವುದೂ ಒಂದು ಕಾರಣ. ಆದರೆ ಯಾವುದೇ "ಕಲೆ" ಗಳಾದರೂ ಸ್ತ್ರೀಯರಿಗೆ ಸುಲಭವಾಗಿ ಕೈಗೆಟುಕುವುದಿಲ್ಲ.

ಮೀನಾಕ್ಷಿ 8ನೇ ತರಗತಿಯಲ್ಲಿ ಓದುವ ಹುಡುಗಿ. ಶಾಲಾ ವಾರ್ಷಿಕೋತ್ಸವದಲ್ಲಿ ಆಕೆಯ ಜಾನಪದ ನೃತ್ಯ ಪ್ರತಿಯೊಬ್ಬರ ಮೆಚ್ಚುಗೆಗೂ ಪಾತ್ರವಾಗಿತ್ತು. ಆಕೆಗೆ ಆ ನೃತ್ಯ ಹೇಳಿಕೊಟ್ಟ ಶಿಕ್ಷಕಿ, ಮೀನಾಕ್ಷಿಯ ಬೆನ್ನು ತಟ್ಟಿ, "ನಿಮ್ಮಪ್ಪ, ಅಮ್ಮಂಗೆ ಹೇಳಿ ಭರತನಾಟ್ಯ ಕಲಿ, ಒಳ್ಳೆ ಹೆಸರು ಬರುತ್ತೆ" ಎಂದು ಪ್ರೋತ್ಸಾಹಿಸಿದ್ದರು. ಈ ಮಾತು ಮನೆಯ ಹಿರಿಯರೆದುರು ಬಂದಾಗ, "ಏನು ನೃತ್ಯ ಕಲಿಯೋದಾ? ನಂ ಮನೆತನದಲ್ಲೇ ಯಾರೂ ಕಲೀಲಿಲ್ಲ ನಿಂದೇನು ಹೆಚ್ಚುಗಾರ್ಕೆ", "ಅದೆಲ್ಲ ನಮ್ಮಂತ ಮರ್ಯಾದಸ್ತರಿಗಲ್ಲ, ಅದಕ್ಕೇಂತ ಬೇರೆ ಜನ ಇರುತ್ತೆ", "ಏನೋ ಪಾಪ, ಎರಡಕ್ಷರ ಕಲೀಲಿ ಅಂತ ಸ್ಕೂಲ್‌ಗೆ ಕಳ್ಸಿದ್ರೆ ನೃತ್ಯ ಅಂತೆ, ನಾಟಕ ಅಂತೆ ಹೀಗೆಲ್ಲ ಇದ್ರೆ ನಾಳೆಯಿಂದ ಮನೇಲೆ ಇರು"........... ಹೀಗೇ ಇನ್ನೂ ಏನೇನೋ ಅಂತೂ ಆಕೆ ನಾಟ್ಯ ಕಲಿವ ಆಸೆ ಬಿಟ್ಟು ಕೊಡಬೇಕಾಯ್ತು.

ರಜಿಯಾ ಸುಮಧುರ ಕಂಠವನ್ನು ಹೊಂದಿರುವ ಹುಡುಗಿ. ಆದರೆ ಅವಳ ಹಾಡುವಿಕೆ ಏನಿದ್ದರೂ ನಾಲ್ಕಾರು ಗೆಳತಿಯರ ಸಮ್ಮುಖದಲ್ಲಿ, ಅವಳ ತರಗತಿಯಲ್ಲಿ, ಶಿಕ್ಷಕರ ಮುಂದೆಯೂ ಆಕೆ ಹಾಡಲು ಹಿಂಜರಿಯುತ್ತಾಳೆ. ಮನೆಯವರಿಗೆ ಗೊತ್ತಾದರೆ ಎಂಬ ಭಯ, ಆತಂಕ ಅವಳಿಗೆ.

ನೃತ್ಯ, ಸಂಗೀತ, ನಾಟಕ, ಚಿತ್ರಕಲೆಗಳು ಕೆಲವೇ ಜನರ ಆಸ್ತಿಯಾಗಿಯೇ ನಡೆದುಕೊಂಡು ಬಂದಿದೆ. ಹೆಣ್ಣು ಮಕ್ಕಳಿಗೆ ಈ ಕಲೆಗಳು — "ಅಷ್ಟ ಜನದ ಮುಂದೆ ಗೆಜ್ಜೆ ಕಟ್ಕೊಂಡ್ ಕುಣಿಯೋದಾ? ಒಳ್ಳೆ ಈ ಬೈಸ್ಕೋಪ್‌ಗಳಲ್ಲಿ ಕುಣಿದಂಗೆ" "ಬಣ್ಣ ಬಳ್ಕೊಂಡ್ ಪಾರ್ಟ್ ಮಾಡ್ಕೊಂಡ್ ಕೂತಿದ್ರೆ ನಾಳೆ ಅತ್ತೆ ಮನೇಲಿ ಸಂಸಾರ ಮಾಡೋದೆಂಗೆ? "ಸಂಗೀತ ಕಲ್ತು ಯಾವ ಸೀಮೆ ಆಳ್ಬೇಕು, ಒಂದೆರಡು ದೇವರ್ನಾಮ ಬಂದ್ರೆ ಸಾಕು, ಗೊಣಗೊಣ ಅನ್ನೋಕೆ" ಹೀಗಿರುವಾಗ ಆ ಎಳೆಯ ಮನಸ್ಸುಗಳು ತಮ್ಮ ಅಭಿರುಚಿ, ಆಸಕ್ತಿ ವೃದ್ಧಿಸಿಕೊಳ್ಳಲು ಅವಕಾಶವೆಲ್ಲಿ? ಬಾಲಕಿಯರಿಗೇನಿದ್ದರೂ ರಂಗೋಲೆ, ಕಸೂತಿ ಕಲಸ, ಬುಟ್ಟಿ ಹೆಣೆಯುವುದು........ಇತ್ಯಾದಿಗಳಷ್ಟನ್ನೇ ರೂಢಿಸಲಾಗುತ್ತದೆ. ಕಾರಣ ಅವು ಭವಿಷ್ಯದಲ್ಲಿ ಗೃಹಿಣಿ ಪಟ್ಟಕ್ಕೇರಲು ಗ್ರೇಸ್ ಮಾರ್ಕ್ಸ್‌ನಂತೆ ನೆರವೀಯುವುದು ಎಂಬುದರಿಂದಾಗಿ. ನಾಳೆ ಹೆಣ್ಣು ನೋಡಲೆಂದು ಬರುವವರೆದುರು ಹೇಳಿಕೊಳ್ಳಲು ಈ ಅರ್ಹತೆಗಳೂ ಬೇಕು. ಹಾಗೆಂದು ಈ ಕಲೆಗಳಲ್ಲಿ ಸಂಪೂರ್ಣ ಸ್ವಾಮಿತ್ವ ಪಡೆಯುವ ಅವಕಾಶ ನಿರೀಕ್ಷಿಸಲಾಗದು. ಪಡೆಯುವುದೂ ದುಸ್ತರ.

ಕಾಂಚನಾ ಪಟ್ಟಣದಲ್ಲಿ ಹುಟ್ಟಿ ಬೆಳೆದು ಹಳ್ಳಿಗೆ ಮದುವೆಯಾಗಿ ಬಂದ ಹೆಣ್ಣು ಆಕೆ. ಗಂಡ ವಿದ್ಯಾವಂತನೂ ಹೌದು, ಒಳ್ಳೆಯ ಉದ್ಯೋಗದಲ್ಲೂ ಇದ್ದಾನೆ. ಕಾಲೇಜಿನ ದಿನಗಳಲ್ಲಿ ಉಣ್ಣೆಯ ನೂಲಿನಿಂದಲೇ ನಾನಾ ಬಗೆಯ ಕಲಾಕೃತಿಗಳನ್ನು, ಹೊಸ

ಹೊಸ ಡಿಸೈನ್ ಸ್ವೆಟರ್, ಶಾಲು, ಇತ್ಯಾದಿಗಳನ್ನು ತಯಾರಿಸುವುದರಲ್ಲಿ ಪರಿಣಿತಳಾಗಿದ್ದವಳು, ಅವಳ ಪ್ರಿಯವಾದ ಹವ್ಯಾಸವೂ ಸಹ. ಮದುವೆಯ ನಂತರ ಗಂಡನ ಸಿಡುಕು, ಅಸಮಾಧಾನಗಳಿಗೆ ಇವಳ ಕಲಾಪ್ರತಿಭೆ ಗುರಿಯಾಗಿ ಅವುಗಳಿಂದ ಈಕೆ ಬಹು ದೂರ ಅಷ್ಟೇ ಅಲ್ಲ, ತನ್ನ ಮುದ್ದು ಮಗಳನ್ನು ಈ ಕಲೆಗಳಿಂದ ದೂರವಿಟ್ಟು ಬೆಳೆಸುತ್ತಿದ್ದಾಳೆ."

ಉತ್ತರ ಕರ್ನಾಟಕದ ಹಳ್ಳಿಗಳಲ್ಲಿ ಕಂಪನಿ ನಾಟಕಗಳೇನೋ ಜನಪ್ರಿಯವೇ. ಅದರಲ್ಲಿ ಸ್ತ್ರೀ ಪಾತ್ರ ನಿರ್ವಹಿಸುವ ಅಭಿನೇತ್ರಿಯರನ್ನು ಆರಾಧಿಸುವ ಮಂದಿಯೂ ಆಗ ಕಡಿಮೆ ಇರಲಿಲ್ಲ, ಈಗಲೂ ಅಷ್ಟೇ ಆದರೆ ತಮ್ಮ ಮನೆಯ ಹೆಣ್ಣು ಮಕ್ಕಳಿಗೆ ಈ ಬಗೆಯ ಕಲಾಸಕ್ತಿ ಸಲ್ಲದೆಂದು ದೂರವೇ ಇಡುತ್ತಿದ್ದರು. ಆದುದರಿಂದಲೇ ಕಲಾವಿದರ ಕಲಾವಿದರ ಕುಟುಂಬಗಳ ಹೆಣ್ಣು ಮಕ್ಕಳಷ್ಟೇ ನಾಟಕಗಲ್ಲಿ ಪಾತ್ರ ನಿರ್ವಹಿಸುತ್ತಾರೆ ಈಗಲೂ ಈ ಪರಿಸ್ಥಿತಿ ಹೆಚ್ಚು ಸುಧಾರಿಸಿಲ್ಲ.

ಸತತ ಸಂಶೋಧನೆಯ ಫಲದಿಂದ ಕತ್ತಲಿಂದ ಬೆಳಕಿಗೆ ತರಲಾಗುತ್ತಿರುವ ತಲೆಮಾರಿನಿಂದ ತಲೆಮಾರುಗಳಿಗೆ ಬಾಯಿಂದ ಬಾಯಿಗೆ ಹಾಡಿನ ರೂಪದಲ್ಲೋ, ಒಗಟಿನ ರೂಪದಲ್ಲೋ, ಕಥಾನಕ ಶೈಲಿಯಲ್ಲೋ, ಕೀರ್ತನೆಯಂತೆಯೋ ಜನತೆಯ ಮುಂದ ಬರುತ್ತಿರುವ ಈ ಕಲೆಗಳನ್ನು ಉಳಿಸಿಕೊಳ್ಳುವ ಯತ್ನದಲ್ಲಿ ಇದ್ದೇವೆ ಎಂದರೆ ಇವುಗಳ ಬಗ್ಗೆ ಸಮಾಜ ತೋರಿಸುವ ಅಕರಾಸ್ತೆ ಎಷ್ಟೆಂದು ತಿಳಿಯಬಹುದು ಈ ವಿಷಯದಲ್ಲಿ ಸ್ತ್ರೀ-ಪುರುಷ ಎಂಬ ಭೇದವಿಲ್ಲ ಎಂದರೂ ಸ್ತ್ರೀಯರ ಪ್ರತಿಭೆಗಳ ನೇಕವು ಇನ್ನೂ ತೆರೆಯ ಮರೆಯಲ್ಲೇ ಇದೆ. ತಮ್ಮ ತಾಯಿಯಿಂದ ಅಥವಾ ಅಜ್ಜಿಯಿಂದ ಕಲಿತ ಪದಗಳು, ಮದುವೆ, ಸೋಬಾನೆಗಳಂತಹ ವಿಶೇಷ ಸಂದರ್ಭಗಳಲ್ಲಷ್ಟೇ ಹಾಡುವಂತಹವು ಎಂಬುದರ ಜೊತೆಗೆ, ಹಿಂಜರಿಕೆಯೂ ಸೇರಿರುತ್ತದೆ.

ಇನ್ನು ಪಟ್ಟಣಗಳ ಮಾತು, ಅಲ್ಲಿ ತಮ್ಮ ಹೆಣ್ಣು ಮಕ್ಕಳಿಗೆ ನೃತ್ಯವನ್ನೋ, ಸಂಗೀತವನ್ನೋ ಕಲಿಸಲು ತಾಯ್ತಂದೆ ಮನಸ್ಸು ಮಾಡುತ್ತಾರೆ. ಆದರೆ ಅದರಲ್ಲಿ ಹೆಚ್ಚಿನವರು ಪ್ರೆಸ್ಟೀಜ್‌ಗಾಗಿ ಎಂದೇ ಕಲಿಸುತ್ತಾರೆ. ಸಮಾಜದಲ್ಲಿ ತಮ್ಮ "ಸ್ಟೇಟಸ್" ಕಾಯ್ದುಕೊಳ್ಳುವ ಸಲುವಾಗಿ ಪ್ರಾರಂಭಿಸುವ ಅಭ್ಯಾಸ ಮಗಳ ಮದುವೆಯ ನಂತರ ಇಲ್ಲವಾಗುವುದೇ ಹೆಚ್ಚು. ಕೆಲವು ನಿರ್ದಿಷ್ಟ ಜಾತಿಗಳಲ್ಲಿ ಎಳೆ ಕಿಶೋರಿಯರಿಗೆ ಸಂಗೀತ ಬೇಕೇಬೇಕು. ನಾಳೆ ಅವಳನ್ನು ನೋಡಲು ಬರುವವರ ಮುಂದೆ ಅವಳು ಹಾಡಬೇಕಲ್ಲ? ಆದ್ದರಿಂದ ಅವಳಿಗೆ ಎಳೆ ವಯಸ್ಸಿನಲ್ಲಿ ಕೆಲ ಅವಧಿಯರೆಗೆ ಸಪಸದ ಶಾಸ್ತ್ರ. "ಏನ್ ಬಿಡಿ, ಬಂದೋನ ಮುಂದೆ ಒಂದು ಹಾಡು ಹೇಳಿದ್ರೆ ಸಾಕು. ಏನ್ ಕಛೇರಿ ಮಾಡೋಷ್ಟೇನ್ ಬೇಡ "ಎಂಬ ಧೋರಣೆಯ ಮಾತು. ಅವಳಿಗೆ ಹೆಚ್ಚು ಕಲಿಯುವ ಆಸೆಯಿದ್ದರೂ ಅದು ಅಲ್ಲೇ ಮುರುಟಹೋಗುವಂಥ ನಡುವಳಿಕೆ.

ಇಷ್ಟೆಲ್ಲ ಹೇಳಿಯೂ ಮತ್ತೊಂದು ಮಾತು ಹೇಳಲೇಬೇಕು. ಈ ಎಲ್ಲ ಧೋರಣೆ, ಅಭಿಪ್ರಾಯಗಳು ಜನರು ವೈಯಕ್ತಿಕವಾಗಿ ವ್ಯಕ್ತಪಡಿಸುವುದರಿಂದ ಹೆಚ್ಚಿನ ತೊಂದರೆ ಕಂಡುಬರದು. ಆದರೆ ಜವಾಬ್ದಾರಿ ಸ್ಥಾನಗಳಲ್ಲಿರುವವರು ಲಲಿತ ಕಲೆಗಳ ಬಗ್ಗೆ ಅವಹೇಳನಕಾರಿ ಹೇಳಿಕೆಗಳನ್ನು ಸಾರ್ವಜನಿಕವಾಗಿ ನೀಡಿದರೆ, ಕಲಾವಿದರಿಗೆ ಕಲಾಭಿಮಾನಿಗಳಿಗೆ ಏನೆನಿಸಬಹುದು? "ಸೀರೆ ಬಿಚ್ಚುವವರು, ಬಣ್ಣ ಬಳಿಯುವವರು" ಎಂದಿದ್ದರು ನಾಯಕರೊಬ್ಬರು. ದೊಡ್ಡವರೇ ಈ ರೀತಿ ಟೀಕಿಸಿದರೆ ಮುಗ್ಧ ತಾಯ್ತಂದೆಗಳು ತಮ್ಮ ಹೆಣ್ಣು ಮಕ್ಕಳನ್ನು ಕಲಾವಿದರನ್ನಾಗಿ ಮಾಡಲು ಮನ ಮಾಡುವರೆ? ಹಾಗೆ ನೋಡಿದರೆ, ಸಂಸ್ಕೃತಿಯ ಭಾಗವಾಗಿರುವ ಕಲೆಗಳ ಬಗ್ಗೆ ಜನರಲ್ಲಿ ಅರಿವು ಮೂಡಿಸಲು, ಸರ್ಕಾರ, ಅಧಿಕಾರಿಗಳು, ಸಂಘಗಳು ಯತ್ನಿಸಬೇಕು. ಬಾಲ ಪ್ರತಿಭೆಗಳ ವಿಕಾಸಕ್ಕೆ ಹೆಚ್ಚು ಯತ್ನಿಸಬೇಕು.

ಶ್ರೀಮತಿ

# ಅಕ್ಕ ಪಕ್ಕ

ವಧು ದಹನ ಪ್ರಕರಣಗಳ ಬಗೆಗೆ ನಮ್ಮ ನಿಷ್ಕ್ರಿಯೆ
ಗರಬಡಿಸುವಂಥದು. ಏನೇ ಆದರೂ ಅದಕ್ಕೆ ಪ್ರತಿಕ್ರಿಯಿ
ಸುವುದನ್ನು ನಾವು ನಿಲ್ಲಿಸಿದ್ದೇವೆ. ಅಷ್ಟೇ ಅಲ್ಲ ಅದನ್ನು
ಒಪ್ಪಿಕೊಳ್ಳುತ್ತ ಹೊರಟಿದ್ದೇವೆ.

ಸುನಿಲ್‌ದತ್.
ಫಿಲಂಫೇರ್ ಸಂದರ್ಶನದಲ್ಲಿ

ಮೀನಾಕುಮಾರಿ ಸಾಂಪ್ರದಾಯಿಕ ಅರ್ಥದ ಸುಂದರಿ
ಯಾಗಿರಲಿಲ್ಲ. ಆಕೆಯ ಸೌಂದರ್ಯವೆಲ್ಲ ಸೆಕ್ಸಿಯಾದ ಧ್ವನಿ
ಯಲ್ಲಿ ಅಡಗಿತ್ತು.

ಅಶೋಕ್ ಕುಮಾರ್
ಫಿಲಂಫೇರ್ ಸಂದರ್ಶನದಲ್ಲಿ

ಏಷ್ಯನ್ ಕ್ರೀಡಾಕೂಟದ ನಂತರ ಮದುವೆ ಆಗುವೆ...
ಅದರಿಂದ ನನ್ನ ಅವಕಾಶಗಳಿಗೇನೂ ತೊಂದರೆಯಾಗುವುದಿಲ್ಲ.

ಪಿ. ಟಿ. ಉಷಾ.

ಮಹಿಳಾ ಕೈದಿಗಳಿಗೆ ಕಾಯ್ದೆ ಹೆಚ್ಚು ಅನುಕೂಲಕರ
ಆಗಿರುವುದು ಹೇಗೆ ಎಂಬುದನ್ನು ನಾವು ಪರಿಶೀಲಿಸಬೇಕು.
ಮಹಿಳೆಯರಿಗೆ ಅನೇಕ ಅಪಾಯಗಳು ಎದುರಾಗುವ ಸಾಧ್ಯತೆ
ಹಿನ್ನೆಲೆಯಲ್ಲಿ ಅವರನ್ನು ರಕ್ಷಿಸಬೇಕಾದುದು ನಮ್ಮ ಜವಾ
ಬ್ದಾರಿ.

ನ್ಯಾ. ಎಂ. ಪಿ. ಠಕ್ಕರ್
ಕಾನೂನು ಆಯೋಗದ ಅಧ್ಯಕ್ಷ.

ಮಾರ್ಟಿನಾ ನವ್ರಾಟಿಲೋವಾ ನನ್ನ ಆದರ್ಶ. ಆಕೆ
ಟೆನಿಸ್ ಮೈದಾನದಲ್ಲಿ ಮಾಡಿದ ಸಾಧನೆಗಳನ್ನು ಮಾತ್ರ ಗಮನಿ
ಸಬೇಕೆ " ಹೊರತು ಖಾಸಗಿ ಬದುಕಿನಲ್ಲಿ ಮಾಡಿದ ಕೃತ್ಯಗ
ಳನ್ನು ಅಲ್ಲ.

ಕ್ರಿಸ್ ಎವರ್ಟ್
ಖ್ಯಾತ ಟೆನಿಸ್ ಆಟಗಾರ್ತಿ

ಪಾಕಿಸ್ತಾನದ ಅನೇಕ ಮಹಿಳೆಯರು ಗರ್ಭನಿರೋಧಕ
ಬಳಸುವುದರ ಪರವಾಗಿದ್ದಾರೆ. ಆದರೆ ಅನೇಕ ಒತ್ತಡಗ
ಳಿಂದ ಅದು ಸಾಧ್ಯವಾಗುತ್ತಿಲ್ಲ.

ಏಷಿಯಾ ವೀಕ್ ಪತ್ರಿಕೆಯಲ್ಲಿ

ಕುಖ್ಯಾತ ಕೊಲೆಗಡುಕ ಆಟೋ ಶಂಕರ್ (ಮದ್ರಾಸ್)
ಜೈಲಿನಿಂದ ತಪ್ಪಿಸಿಕೊಳ್ಳಲು ಕಾರಣಳಾದ ಅತನ ಹೊಸ
ಪ್ರೇಯಸಿ ದೇವಿಯೇ ಆತ ಸಿಕ್ಕಿಬೀಳಲೂ ಕಾರಣಳಾದಳು.

ಟೆಲಿಗ್ರಾಫ್ ವರದಿ

ಗೌತ್ರಾಯ್ ಮಂತ್ರಿಯಾದ ದಿನದಿಂದ ನನ್ನ ಜೊತೆ
ಮಾತನಾಡಿಲ್ಲ............ ಯಾವ ಕಡತಗಳನ್ನೂ ವಿಲೇವಾರಿ
ಮಾಡಬಾರದು ಎಂದು " ನೋಟ್ " ಮಾತ್ರ ಬರುತ್ತಿವೆ.

ಮೇನಕಾ ಗಾಂಧಿ
ವೀಕ್ ಸಂದರ್ಶನದಲ್ಲಿ

ಭಾರತದ ಮಹಿಳೆಯರ ಎದೆಹಾಲಿನಲ್ಲಿ ವಿಶ್ವದ ಎಲ್ಲೇ
ಗಿಂತ ಹೆಚ್ಚಾಗಿ ಡಿ.ಡಿ.ಟಿ. ಮತ್ತು ಬಿ.ಎಚ್.ಸಿ, ಅಂಶ ಉ
ದುಕೊಂಡಿದೆ.

ದಿ ಇಂಡಿಯಾ ಮ್ಯಾಗಜಿನ್
ಲೇಖನ

ಗಗನಕ್ಕೇರುತ್ತಿರುವ ಮುದ್ರಣ ಕಾಗದದ ಬೆಲೆ ಅಂಚೆ ವೆಚ್ಚ ಮುಂತಾದವುಗಳಿಂದಾಗಿ ಪತ್ರಿಕೆಯನ್ನು ಪ್ರಕಟಿಸುವುದು ಕಷ್ಟಕರವಾಗಿದೆ. ಮಾನಸಕ್ಕೆ ಆಸಕ್ತಿ ಹಾಗೂ ಪ್ರೋತ್ಸಾಹ ವ್ಯಕ್ತಪಡಿಸಿ ಪತ್ರ ಬರೆಯುವ ಸಹೃದಯರು ಹಾಗೂ ಚಂದಾ ಮುಗಿದಿರುವ ಓದುಗರು ತಕ್ಷಣ ಚಂದಾಹಣ ಕಳಿಸಿದರೆ ಪತ್ರಿಕೆಯನ್ನು ಉಳಿಸಿ ಬೆಳೆಸಲು ನೀರೆರೆದು ಪ್ರೋತ್ಸಾಹಿಸಿದಂತಾಗುತ್ತದೆ. ಓದುಗರೆಲ್ಲರನ್ನು ಉಳಿಸಿಕೊಳ್ಳಬೇಕೆಂದು ನಮ್ಮ ಅಪೇಕ್ಷೆಯಾದರೂ ಉಚಿತವಾಗಿ ಒಂದು ಸಂಚಿಕೆಯನ್ನು ಕಳಿಸಲು ಉಂಟಾಗುವ ಖರ್ಚನ್ನು ಭರಿಸುವುದು ಪತ್ರಿಕೆಗೆ ಹೊರೆಯಾಗುತ್ತದೆ. ಪ್ರಿಯ ಓದುಗರು ಸಹಕರಿಸಿ ತಕ್ಷಣ 20.00 ರೂ ಚಂದಾ ಹಣ ಕಳಿಸಿಕೊಡಬೇಕೆಂದು ಕೋರುತ್ತೇವೆ.

ಸಂ. ಮಂ.

ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು ಎಚ್. ಎಸ್. ರಾಜೇಶ್ವರಿ, ಮಾನವಿ ಮುದ್ರಣಾಲಯ, ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು — ೫೬೦೦೬೭.

ನಂ ಮ್ಯಾಗ್ (5) ಪಿಆರ್‌ಬಿ ಡಿಕ್ಲೇರ್ಡ್: 284 | 8889

# ಮಾನಸ

ಮಹಿಳೆಯರ ಮೇಲೆ ನಡೆಯುವ ಅಮಾನವೀಯ ದೌರ್ಜನ್ಯ, ಹಿಂಸೆಗಳನ್ನು ಬೆಳಕಿಗೆ ತರುವುದಕ್ಕಾಗಿ.

ಶೋಷಿತ ವ್ಯವಸ್ಥೆಯನ್ನು, ಅದರ ವಿವಿಧ ರೂಪಗಳನ್ನು ಗುರುತಿಸುವುದಕ್ಕಾಗಿ

ಮಹಿಳೆಯರೊಂದಿಗೆ ಆತ್ಮೀಯ ಅರ್ಥಪೂರ್ಣ ಸಂವಾದಕ್ಕಾಗಿ.

ಮಹಿಳಾ ಆಂದೋಲನದ ಹೊಸ ದಿಕ್ಕುಗಳ ಹುಡುಕಾಟಕ್ಕಾಗಿ.

ವಿಳಾಸ : "ಮಾನಸ"
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು—560067